


ಸಮಾಜ ಶಿಕ್ಷಣ ಪ್ರಸಾರಕ ಗ್ರಂಥಮಾಲೆ [illegible] ಪುಷ್ಪ.

# ಜನಪ್ರಿಯ ರಾಮಾಯಣ.



—: ಲೇಖಕರು :—

**ಶ್ರೀ. ಈಶ್ವರಚಂದ್ರ ಚಿಂತಾಮಣಿ, ನಾಗಠಾಣ.**

ಮೊದಲನೆಯ ಮುದ್ರಣ ಪ್ರತಿ ೧,೦೦೦.

೧೯೫೬ ] [ ಬೆಲೆ ೦-೪-೦

# ಕರ್ನಾಟಕ ಪ್ರಾದೇಶಿಕ ಸಮಾಜ ಶಿಕ್ಷಣ ಸಮಿತಿಯವರ

# ಪ್ರಕಟನೆಗಳು.

೧ ಆತ್ಮೋದ್ಧಾರ

೨ ಗ್ರಾಮೋದ್ಧಾರ ಪದಗಳು

೩ ಲಾವಣಿ ಪದಗಳ ಸಂಗ್ರಹ

೪ ಪೌರನೀತಿಯ 'ಅ ಆ'

೫ ಹಿರಿಮೆಯ ಮಂತ್ರ ಅರ್ಥಾತ್ ಸ್ವಚ್ಛತೆ

೬ ಶಿಶುಸಂಗೋಪನ ಹಾಗೂ ಪ್ರಥಮ ಚಿಕಿತ್ಸೆ

೭ ಅಂದ ಚಂದ

೮ ಬಸವಣ್ಣನವರು

೯ ಅಕ್ಕ ಮಹಾದೇವಿ

೧೦ ಬ್ಯಾಂಕುಗಳ ಉಪಯೋಗ

೧೧ ಮಾತನಾಡುವ ದೇವರು

೧೨ ಮಾದರಿಯ ಮಲ್ಲಣ್ಣ

೧೩ ಮರಳಿ ಹಳ್ಳಿಗೆ

೧೪ ಅಕ್ಕ ತಂಗಿಯರಿಗೆ

೧೫ ಹರಿಜನೋದ್ಧಾರ

೧೬ ಯುಗಪುರುಷ ಗಾಂಧೀಜಿ

೧೭ ಬಾಳಿನ ಬೆಳಕು

೧೮ ವಯಸ್ಕರ ಪದ್ಯಾವಳಿ

೧೯ ಭಗವಾನ್ ಮಹಾವೀರ

೨೦ ಕರ್ನಾಟಕದ ಕಥೆಗಳು

೨೧ ಸತ್ಯನಿಧಿ ಹರಿಶ್ಚಂದ್ರ.

೨೨ ಜನಪ್ರಿಯ ರಾಮಾಯಣ

# ಅರಿಕೆ.

ಒಲುಮೆಯ ಓದುಗ,

‘ರಾಮಾಯಣ’ ವೆಂದರೆ ಬಹುದೊಡ್ಡ-ಬೃಹದಾಕಾರದ ಕಥೆ; ಹಿಗ್ಗಿಸಿದಂತೆ ಹಿಗ್ಗುವ ಹನುಮಂತನ ಬಾಲದಂತೆ ೫೦೦-೬೦೦ ಪುಟಗಳಲ್ಲಿ ಬಹು ಹಿಡಿತದಿಂದ ಮುಗಿಯುವ ‘ಸಂಪೂರ್ಣ ರಾಮಾಯಣ’ ದ ಕಥೆಯು, ನನ್ನ ಕೈಯಲ್ಲಿ ತೀರ ಪುಟ್ಟಕೃತಿಯಾಗಿ ಬಂದಿದೆ. ‘ರಾಮಾಯಣ’ ದಲ್ಲಿ ವರ್ಣನೆಯೇ ಹೆಚ್ಚಾದರೆ ಈ ‘ಜನಪ್ರಿಯ ರಾಮಾಯಣ’ ದಲ್ಲಿ ಕಥೆಯು ಮೂಲವೇ ಚಿಕ್ಕ ರೂಪತಾಳಿದೆ; ವರ್ಣನೆಯು ಕಾಣಿಸಿಕೊಂಡಿದೆ.

ಹೊಸತಾಗಿ ಓದು ಕಲಿತವರಿಗಾಗಿ ಅತಿ ಸರಳ ಶೈಲಿಯಲ್ಲಿ, ಸುಲಭದರಲ್ಲಿ ದೊರಕಬೇಕೆಂಬ ಆಶಯದಿಂದ ಬರೆದುದಾಗಿದೆ. ಪ್ರೌಢರಿಗಾಗಿ ಬರೆದಿದ್ದರೂ—ಇದರಲ್ಲಿ ಕೆಳವರ್ಗದ ಪ್ರಾಥಮಿಕ ಸಾಲೆಯ ಬಾಲಕರೂ ಪಾಲುಕೊಡಿಯಾರು. ಎಳೆಯರಿಗೆ ಇಂಥ ಕಥೆ ಓದಲು ತುಂಬ ಇಷ್ಟವಲ್ಲವೇ? ಇನ್ನು, ರಾಮಾಯಣದ ಮಹತಿಯನ್ನು ಬಲ್ಲವರಿಗೆ ಈ ಕೃತಿಯ ಮಹತ್ವವನ್ನು—ಸಾಫಲ್ಯವನ್ನು ಹೇಳುವದು ಅನವಶ್ಯಕವೆಂದು ತಿಳಿಯುತ್ತೇನೆ.

ಈಗ ಕನ್ನಡದಲ್ಲಿರುವ ಸಣ್ಣ, ದೊಡ್ಡ ರಾಮಾಯಣಗಳು ಲೋಕ ಶಿಕ್ಷಣ ವರ್ಗದ ಓದುಗರಿಗೆ ನಿಲುಕುವಂತಿಲ್ಲ. ಬೆಲೆಯಿಂದಲ್ಲ; ಶೈಲಿಯಿಂದ—ಓದಿನಿಂದ ನನಗೆ ಕಂಡ ಈ ಕೊರತೆ

ಯನ್ನು ನೀಗಿಸಲೆಂದು ಏನೋ ಪ್ರಯತ್ನಿಸಿದ್ದೇನೆ. ರಾಮಾಯಣ ವನ್ನು ಅವರಿವರ ಮುಖದಿಂದ ಕೇಳುವ ಸೋದರರು ಇದನ್ನು ಓದಿ – ಅರಿತುಕೊಂಡರೆ ನನ್ನ ಈ ಸೇವೆ ಸಾರ್ಥಕವೆಂದು ತಿಳಿಯುತ್ತೇನೆ. ನನ್ನ ಇತರ ಪುಟ್ಟ ಕೃತಿಗಳನ್ನು ಬರಮಾಡಿ ಕೊಂಡು, ಮೆಚ್ಚಿದ ಸೋದರರು ಇದನ್ನು ಸ್ವೀಕರಿಸುವರೆಂದು ನಂಬಿರುವೆ.

ಈ 'ಲೋಕ ಶಿಕ್ಷಣ ಪ್ರಸಾರ' ಕಾರ್ಯದಲ್ಲಿ ದುಡಿಯಲು ಉತ್ಸಾಹ ನೀಡುತ್ತಿರುವ ನಮ್ಮ 'ಕರ್ನಾಟಕ ಸಮಾಜ ಶಿಕ್ಷಣ ಸಮಿತಿ'ಯ ಮುಖ್ಯಾಧಿಕಾರಿಗಳಿಗೆ ತುಂಬ ಋಣಿ ಯಾಗಿದ್ದೇನೆ.

ನಾಗಠಾಣ,
೧೫–೧–೧೯೫೭.

ಇಂತು,
ಈಶ್ವರಚಂದ್ರ ಚಿಂತಾಮಣಿ.

# ಮುನ್ನುಡಿ.

'ಜನಪ್ರಿಯ ರಾಮಾಯಣ' ವೆಂಬ ಹೊತ್ತಿಗೆಯನ್ನು ಬರೆದು ಕೊಟ್ಟವರು ಶ್ರೀ. ಈಶ್ವರಚಂದ್ರ ಚಿಂತಾಮಣಿಯವರು. ಶ್ರೀ. ಚಿಂತಾಮಣಿಯವರು ಸಮಾಜ ಶಿಕ್ಷಣ ಸಾಹಿತ್ಯ ಪ್ರಸಾರ ಕಾರ್ಯದಲ್ಲಿ ಹೆಚ್ಚು ಆಸ್ಥೆಯನ್ನು ವಹಿಸಿ ನಮ್ಮ ಸಮಿತಿಯವರಿಗೆ ಸಹಾಯ ಮಾಡುತ್ತಿರುವರು.

'ರಾಮಾಯಣ' ದಂಥ ಮಹಾಕಾವ್ಯವನ್ನು ಸರ್ವಸಾಮಾನ್ಯ ಜನರಿಗೆ ಸುಲಭವಾಗಿ ತಿಳಿಯುವಂತೆ ಹಾಗೂ ಸಂಕ್ಷಿಪ್ತವಾಗಿ ಕಥೆಯ ರೂಪದಲ್ಲಿ ಬರೆಯುವದು ಕಠಿಣ ಕೆಲಸ. ಈ ಕಾರ್ಯವನ್ನು ಅವರು ಬಹಳ ಉತ್ತಮ ರೀತಿಯಿಂದ ಮಾಡಿರುವರೆಂದು ಹೇಳಬಹುದು.

ಹಳ್ಳಿಯ ಜನರಿಗೆ 'ರಾಮಾಯಣ'ವನ್ನು ಓದುವದು ಹಾಗೂ ಕೇಳುವದೆಂದರೆ ಬಹಳ ಆನಂದ. ಅದನ್ನು ಎಷ್ಟು ಸಲ ಓದಿ, ಕೇಳಿದರೂ ಸಹ ಜನರಿಗೆ ಬೇಸರಿಕೆಯಾಗುವದಿಲ್ಲ. ಜನತೆಯು ಆ ಮಹಾಕಾವ್ಯದ ತಿರುಳನ್ನು ಈ ಚಿಕ್ಕ ಹೊತ್ತಿಗೆಯಲ್ಲಿ ಕಾಣಬಹುದು. ಸಮಾಜ ಶಿಕ್ಷಣಾಭಿಮಾನಿಗಳೆಲ್ಲರು ಈ ಹೊತ್ತಿಗೆಯನ್ನು ಓದಿ ಸಂತೋಷ ಪಡುವರೆಂದು ನಮ್ಮ ಆಶೆ. ಈ ಪುಸ್ತಕವನ್ನು ಬರೆದು ಕೊಟ್ಟ ಬಗ್ಗೆ ನಮ್ಮ ಸಮಿತಿಯು ಶ್ರೀ. ಚಿಂತಾಮಣಿಯವರಿಗೆ ತುಂಬಾ ಋಣಿಯಾಗಿದೆ.

ಬೆಳಗಾವಿ,
ತಾ. ೧೫-೮-೧೯೫೬

ಆರ್. ಕೆ. ಮೊಣಶಿ,
ಸಮಾಜ ಶಿಕ್ಷಣಾಧಿಕಾರಿಗಳು,
ಬೆಳಗಾವಿ.




# ಜನಪ್ರಿಯ ರಾಮಾಯಣ.

ಶ್ರೀರಾಮಚಂದ್ರನ ಕಥೆಯನ್ನು ಕೇಳದವರು ಬಹಳ ಕಡಿಮೆ. ಒಂದು ಸಲ ಕೇಳಿದರೂ ಮತ್ತೆ ಮತ್ತೆ ಕೇಳಬೇಕೆಂಬ ಹಂಬಲವಾಗುವದು. ಜನಪ್ರಿಯವಾದ 'ರಾಮಾಯಣ' ವನ್ನು ಬಹುಜನ ಪಂಡಿತರು ಬೇರೆ ಬೇರೆ ಭಾಷೆಗಳಲ್ಲಿ ಬರೆದಿರುವರು. ಭಾರತೀಯರಾದ ನಮಗೆ ರಾಮ, ಸೀತೆ, ಲಕ್ಷ್ಮಣ, ಹನುಮಂತ, ವಿಭೀಷಣ ಇವರು ಬಾಂಧವರೇ. ಇವರ ಚರಿತ್ರೆಯೇ ರಾಮಾಯಣವು. 'ರಾಮಾಯಣ' ವನ್ನು 'ವಾಲ್ಮೀಕಿ' ಎಂಬ ಕವಿಗಳು ಸಂಸ್ಕೃತ ಭಾಷೆಯಲ್ಲಿ ಬರೆದರು. ಕನ್ನಡದಲ್ಲಿಯೂ ಕೆಲವು ಕವಿಗಳು ಬರೆದರು. ರಾಮಾಯಣವು ಬಹಳ ದೊಡ್ಡ ಕಥೆ; ಮುಗಿಯದ ಪುರಾಣ. ನಾವು ಮಾತು ಮಾತಿಗೆ 'ಆ ಕೆಲಸ ಮುಗಿಯಬೇಕಾದರೆ ರಾಮಾಯಣ ಆಯಿತು!' ಎಂದು ಯಾಕೆ ಹೇಳುವೆವು?! ರಾಮಾಯಣವೆಂದರೆ ಉದ್ದವಾದ ಕಥೆಯೆಂದೇ ನಾವು ಹೀಗೆ ಅನ್ನುವೆವು. ಇರಲಿ. ರಾಮಾಯಣವನ್ನು ಬಹು ಸಂಕ್ಷಿಪ್ತವಾಗಿ ಸರಳ ಮಾತುಗಳಲ್ಲಿ ಓದೋಣ. ಒಬ್ಬರ ಮುಖದಿಂದ ಕೇಳುವದರಿಂದ ಆಗುವ ಆನಂದಕ್ಕಿಂತಲೂ ನಾವೇ

ಓದಿ ತಿಳಿಯುವ ಆನಂದವು ಹೆಚ್ಚಿನದಾಗಿದೆ. ರಾಮಾಯಣವು ಸಾವಿರಾರು ವರುಷಗಳಾಚೆ ನಡೆದ ಕಥೆಯಾಗಿದೆ.

## ದಶರಥ ಮಹಾರಾಜ.

ಅಯೋಧ್ಯಾ ಎಂಬ ಮಹಾ ನಗರದೊಳಗೆ ದಶರಥನೆಂಬ ರಾಜನು ರಾಜ್ಯವಾಳುತ್ತಿದ್ದನು. ಅವನು ಸೂರ್ಯ ವಂಶದ ರಾಜನು. ಬಹಳ ಶೂರನಾಗಿದ್ದನು. ಅವನಿಗೆ ಮೂವರು ರಾಣಿಯರಿದ್ದರು. ಸಕಲ ಸೌಭಾಗ್ಯದಿಂದ ರಾಜ ರಾಣಿಯರು ನಲಿಯುವಂತಿರಲಿಲ್ಲ! ಯಾಕಂದರೆ ಒಬ್ಬರೂ ಹಡೆದಿರಲಿಲ್ಲ! ಮಕ್ಕಳು ಇಲ್ಲದ ಚಿಂತೆಯಿಂದ ಅವರು ತೊಳಲಿ ಬಳಲುವರು. ಅನೇಕ ರೀತಿಯ ವ್ರತಗಳನ್ನು ಆಚರಿಸುತ್ತ ಮಕ್ಕಳನ್ನು ಬೇಡಿ ಬೆಂಡಾಗಿದ್ದರು. 'ವಸಿಷ್ಠ ಮುನಿ' ಗಳು ದಶರಥ ರಾಜನ ಗುರುಗಳು. ಗುರುಗಳ ಆಶೀರ್ವಾದದಿಂದ ರಾಜನು ಗೋದಾನ, ಭೂದಾನ, ಅನ್ನದಾನ ಮಾಡಲು ದೇವರ ದಯದಿಂದ ಅವನ ಮೂವರೂ ಹೆಂಡರು ಗರ್ಭವತಿಯರಾದರು. ರಾಜನಿಗೆ ಬಹಳ ಸಂತೋಷವಾಯಿತು!

ಹಿರಿಯ ರಾಣಿಯಾದ 'ಕೌಸಲ್ಯಾ ದೇವಿ' ಯು ಶ್ರೀರಾಮಚಂದ್ರನನ್ನು ಹಡೆದಳು. ಎರಡನೆಯ ರಾಣಿ

ಯಾದ 'ಸುಮಿತ್ರಾ ದೇವಿ'ಯು ಲಕ್ಷ್ಮಣನನ್ನು ಹಡೆದಳು. ಕಿರಿಯ ರಾಣಿಯಾದ 'ಕೈಕಾದೇವಿ'ಯು ಹೊಟ್ಟೆಯಿಂದ 'ಭರತ' 'ಶತ್ರುಘ್ನ' ರೆಂಬವರು ಜನಿಸಿದರು. ಮುತ್ತಿನಂತಹ ನಾಲ್ವರು ಗಂಡು ಮಕ್ಕಳು ಬಿದಿಗೆಯ ಚಂದ್ರನಂತೆ ಬೆಳೆದರು. ರಾಜನು ಬಹಳ ಹಿಗ್ಗಿದನು.

## ಚಂದ್ರನನ್ನು ಬೇಡಿದ ರಾಮ.

ಒಂದು ದಿವಸ ಕೂಸು ರಾಮಚಂದ್ರನು ಆಕಾಶ ದೊಳಗೆ ಹೊಳೆಯುವ ಚಂದ್ರನನ್ನು ಬೇಡಿ ಅಳತೊಡಗಿದನು. ಯಾರು ರಮಿಸಿದರೂ ಕೂಸು ಸಮಾಧಾನ ವಾಗಲಿಲ್ಲ, ಎಲ್ಲರಿಗೂ ಬಹಳ ಚಿಂತೆಯಾಯಿತು! ಚತುರಳಾದ 'ಮಂಥರಿ' ಎಂಬ ದಾಸಿಯು ರಾಮನ ಕೈಯೊಳಗೆ ಕನ್ನಡಿಯನ್ನು ಕೊಟ್ಟಳು. ಚಂದ್ರನು ಕನ್ನಡಿಯಲ್ಲಿ ಕಾಣಲು ರಾಮನು ಅಳು ನಿಲ್ಲಿಸಿ ನಗ ತೊಡಗಿದನು.

## ದಶರಥನು ಕುತ್ತಿನಿಂದ ಪಾರಾದನು.

ಒಮ್ಮೆ ದಶರಥ ಮಹಾರಾಜನು ವೈರಿಗಳೊಡನೆ ಯುದ್ಧಕ್ಕೆ ಹೋದನು. ಹೋಗುವಾಗ ತನ್ನ ಪ್ರೀತಿಯ ಕಿರಿಯ ರಾಣಿ ಕೈಕಾದೇವಿಯನ್ನು ಕರೆದು

ಕೊಂಡೇ ಹೋದನು. ಅವಳಮೇಲೆ ಅವನಿಗೆ ಪ್ರೀತಿ ಬಹಳ. ರಥದಲ್ಲಿ ಕೈಕಾದೇವಿ ಕುಳಿತಿದ್ದಾಳೆ. ದಶರಥನು ಮುಂದೆ ಕುಳಿತು ಬಾಣ ಬಿಡುತ್ತಿದ್ದನು. ಆಗ ರಥದ ಗಾಲಿಯ ಕೀಲು ಕಳಚಿ ಹೋಯಿತು! ಅದನ್ನು ನೋಡಿದ ರಾಣಿಯು ಘಾತವಾಗುವದೆಂದು ಗಾಲಿಯ ಕೀಲಿನ ತೂತಿನಲ್ಲಿ ತನ್ನ ಬೆರಳು ಹಾಕಿದಳು. ರಥವು ಉರುಳಿ ಬೀಳಲಿಲ್ಲ! ಅಷ್ಟರಲ್ಲಿ ವೈರಿಗಳು ಸೋತರು! ರಾಜನು ಹಿಂದೆ ತಿರುಗಿ ರಾಣಿಯನ್ನು ನೋಡಿದಾಗ ಅವಳ ಕೈ-ಬೆರಳು ರಕ್ತಮಯವಾಗಿತ್ತು! ರಾಣಿಯ ಸಾಹಸ ಕಂಡು, ತಾನು ಸಂಕಟದಿಂದ ಪಾರಾದ ಕಾರಣ 'ಬೇಕಾದ ಮೂರು ವರಗಳನ್ನು ಬೇಡು, ಕೊಡುವೆನು' ಎಂದು ಕೇಳಿದನು. ಆಗ ರಾಣಿಯು 'ನನಗೆ ಬೇಕಾದಾಗ ಬೇಡುವೆನು' ಎಂದಳು.

## ರಾಜಕುಮಾರರ ಶಿಕ್ಷಣ.

ರಾಮ, ಲಕ್ಷ್ಮಣ, ಭರತ ಹಾಗೂ ಶತ್ರುಘ್ನರು ತಮ್ಮ ರಾಜಗುರುಗಳಾದ ವಶಿಷ್ಠ ಮುನಿಗಳ ಹತ್ತಿರ ವಿದ್ಯೆ ಕಲಿಯುತ್ತ ಜ್ಞಾನವಂತರಾದರು. ಬಾಲಕರ ಒಳ್ಳೆಯ ಗುಣಗಳಿಗೆ ಗುರುಗಳು ಮೆಚ್ಚಿದರು. ಅವರು ಗುರುಗಳ ಹತ್ತಿರ ಅನೇಕ ವರುಷಗಳತನಕ ಅಭ್ಯಾಸ ಮಾಡಿ ವಿದ್ಯೆಯೊಡನೆ ವೀರತನವನ್ನೂ, ರಾಜನೀತಿ

ಯನ್ನೂ ಕಲಿತರು. ಶೂರ ಧೀರರಾದ ಕುಮಾರರನ್ನು ಕಂಡು ರಾಜನಿಗೆ ಬಹಳ ಹೆಮ್ಮೆಯಾಯಿತು. ಪ್ರಜೆಗಳು ಕುಣಿದಾಡಿದರು !

## ದುಷ್ಟ ದಂಡನೆ – ಶಿಷ್ಟ ಪರಿಪಾಲನ.

ಒಳ್ಳೆಯವರನ್ನು ಗೌರವಿಸುವದೂ, ದುಷ್ಟರನ್ನು ದಂಡಿಸುವದೂ ರಾಜಧರ್ಮ. ರಾಮ - ಲಕ್ಷ್ಮಣರು ಸಕಲರೊಡನೆ ಸೋದರರಂತೆ ಕೂಡಿಕೊಂಡು ಇದ್ದರು. ರಾಜರು ಬೇರೆ - ಪ್ರಜೆಗಳು ಬೇರೆ ಎಂಬ ಭೇದವಿರಲಿಲ್ಲ. ಒಳ್ಳೆಯವರ ಮೇಲೆ ಅನ್ಯಾಯ ಮಾಡುನವರನ್ನೂ ಅವರು ಸದೆಬಡೆಯುತ್ತಿದ್ದರು. ಹೀಗಾಗಿ ಕುಮಾರರ ಕೀರ್ತಿ ಬೆಳೆಯ ತೊಡಗಿತು. ಅವರು ಬೆಳೆದು ದೊಡ್ಡವರಾದರು.

ಒಮ್ಮೆ 'ವಿಶ್ವಾಮಿತ್ರ ಮುನಿ'ಗಳು ದಶರಥ ರಾಜನ ಕಡೆಗೆ ಬಂದರು. ತಪೋವನದಲ್ಲಿ ಮುನಿಗಳಿಗೆ ಆಗಾಗ ರಾಕ್ಷಸರು ತೊಂದರೆ ಕೊಡುತ್ತಿದ್ದರು. ಹೀಗಾಗಿ ಸನ್ಯಾಸಿಗಳ ಯಜ್ಞಕ್ಕೆ - ತಪಸ್ಸಿಗೆ ಭಂಗ ಬರುತ್ತಿತ್ತು. ರಾಕ್ಷಸರನ್ನು ಸಂಹರಿಸಲು ಶ್ರೀರಾಮ ಲಕ್ಷ್ಮಣರನ್ನು ಕಳಿಸಿಕೊಡಲು ಮುನಿಯು ಕೇಳಿದನು. ರಾಜನು ದುಷ್ಟರನ್ನು ದಂಡಿಸಲು ತನ್ನ ಕುಮಾರರನ್ನು ಸಂತೋಷದಿಂದ ಕಳಿಸಿದನು. ವಿಶ್ವಾ

ಮಿತ್ರ ಮುನಿಗಳು ಶ್ರೀರಾಮ ಲಕ್ಷ್ಮಣರನ್ನು ಕರೆದು ಕೊಂಡು ಹೋದರು. ಅಡವಿಯೊಳಗೆ ಹೋಗುವಾಗ 'ತಾಟಿಕಾ' ಎಂಬ ಮಹಾ ರಾಕ್ಷಸಿಯು ಗುಡುಗುತ್ತ ಬಂದಳು. ಅವಳನ್ನು ಸಂಹಾರ ಮಾಡಲು ಯಾರಿಗೂ ಸಾಧ್ಯವಾಗಿರಲಿಲ್ಲ. ಆಗ ಶ್ರೀರಾಮನು ಅವಳನ್ನು ಒಂದೇ ಬಾಣದಿಂದ ಕೊಂದನು. ನಂತರ ಅವರು ಅನೇಕ ನೀಚ ರಾಕ್ಷಸರನ್ನು ಸಂಹಾರ ಮಾಡಿದರು. ಕುಮಾರರ ಸಾಹಸ - ಶೂರತನಕ್ಕೆ ವಿಶ್ವಾಮಿತ್ರ ಮುನಿ ಗಳು ತುಂಬಾ ಮೆಚ್ಚಿದರು. ಮುನಿಗಳು ಕುಮಾರಗೆ ಅನೇಕ ರೀತಿಯ ಪಾಠಗಳನ್ನು ಹೇಳಿದರು. ಹೀಗಾಗಿ ರಾಮ - ಲಕ್ಷ್ಮಣರ ಬಲವು ಬೆಳೆಯಿತು.

## ಸೀತಾ ಸ್ವಯಂವರ.

ರಾಮ, ಲಕ್ಷ್ಮಣರ ತಾರುಣ್ಯದ ತೇಜ ಮೋಹಕ ವಾಗಿತ್ತು. ವಿಶ್ವಾಮಿತ್ರ ಮುನಿಗಳ ಸಂಗಡ ಅವರು ಸುಖದಿಂದ ಇದ್ದರು. ಒಂದು ದಿವಸ ಮುನಿಗಳು ರಾಮ, ಲಕ್ಷ್ಮಣರಿಗೆ ಹೀಗೆ ಹೇಳಿದರು: 'ವೀರ ಕುಮಾರರೇ, ಇಲ್ಲಿಂದ ತುಸು ದೂರದಲ್ಲಿ 'ಮಿಥಿಲಾ' ಎಂಬ ಮಹಾನಗರ ವಿದೆ. 'ಜನಕರಾಜ' ಎಂಬವನು ಆ ನಗರದ ರಾಜನು. ಜನಕರಾಜನು ಶೂರ ಧೀರ ನೆಂದು ಹೆಸರಾದವನು. ಅವನಿಗೆ ಒಬ್ಬಳೇ ಮಗಳಿ ರುವಳು. ಅವಳು ಬಹಳ ಚಲುವೆ. ಅವಳ ಹೆಸರು

'ಸೀತೆ' ಈಗ ಜನಕರಾಜನು ಸುಂದರಿಯೂ ತರುಣಿಯೂ ಆದ ಸೀತೆಯ ಮದುವೆ ಮಾಡಲಿರುವನು. ಭೂಲೋಕದ ಎಲ್ಲ ರಾಜರೂ ಮಿಥಿಲೆಯ ರಾಜನ ಮಗಳ 'ಸ್ವಯಂವರ'ಕ್ಕೆ ಬರಲು ಆಮಂತ್ರಣ ಹೋಗಿವೆ, ಕಾರಣ ನಾನೂ ಹೋಗಬೇಕಾಗಿದೆ. ಎಲ್ಲ ಗುರುವರ್ಗದವರೂ, ಋಷಿಗಳೂ ಅಲ್ಲಿಗೆ ಬರುವರು. ನೀವಾದರೂ ನನ್ನ ಸಂಗಡ ಬರುವಿರಾ?' ಎಂದು ಕೇಳಿದರು. ಮುನಿಗಳ ಮಾತಿಗೆ ಒಪ್ಪಿ, ಅಣ್ಣ ತಮ್ಮ ಇಬ್ಬರೂ ಮಿಥಿಲಾ ನಗರಕ್ಕೆ ಹೊರಟರು. 'ಸ್ವಯಂವರ' ಅಂದರೆ ಹೆಣ್ಣು ಮಗಳು, ಕೂಡಿದ ರಾಜರಲ್ಲಿ ತನಗೆ ಸರಿ ಕಂಡವನನ್ನು ತಾನೇ ಆರಿಸಿಕೊಂಡು ಮದುವೆಯಾಗುವದು. ಆಗಿನ ಕಾಲದ ರಾಜಪದ್ಧತಿಯಾಗಿತ್ತು.

## ರಾಮನೇ ಗೆದ್ದನು.

'ಸ್ವಯಂವರ'ಕ್ಕೆ ಸಾವಿರಾರು ರಾಜರು ಬಂದಿದ್ದರು. ವಿಶ್ವಾಮಿತ್ರ ಮುನಿಗಳು ತಮ್ಮ ಶಿಷ್ಯರೊಂದಿಗೆ ಅಲ್ಲಿಗೆ ಹೋದರು. ಜನಕರಾಜನು ಎಲ್ಲ ರಾಜರ ಮುಂದೆ ನಿಂತು, ತನ್ನ ಕುಮಾರಿಯನ್ನು ಕರೆತಂದು, ಒಂದು ಮಹಾ 'ಶಿವಧನುಷ್ಯವನ್ನು' ಅಂದರೆ ಬಿಲ್ಲನ್ನು ತಂದು ಇಟ್ಟನು. 'ಬಿಲ್ಲನ್ನು ಎತ್ತಿ,

ಯಾವನು ಮುರಿಯುವನೋ ಅವನಿಗೆ ಸೀತೆಯನ್ನು ಕೊಡುವೆನು ' ಎಂದು ನುಡಿದನು. ಆ ಬಿಲ್ಲು ಭಯಂಕರ ಭಾರವಾಗಿತ್ತು. ಅನೇಕ ರಾಜರು 'ನಾನು ಮುರಿಯುವೆ, ನಾನು ಗೆದೆಯುವೆ ' ಎಂದು ಕುಣಿದಾಡಿದರು. ಸರತಿಯಂತೆ ಒಬ್ಬೊಬ್ಬರು ಬಿಲ್ಲಿಗೆ ಕೈ ಹಾಕಿದರು. ಬಿಲ್ಲನ್ನು ಎತ್ತುವದು ಸಹ ಯಾರಿಗೂ ಆಗಲಿಲ್ಲ! ಎಲ್ಲ ರಾಜರ ಮುಖಗಳು ಬಾಡಿದವು! ಜನಕ ರಾಜನಿಗೆ ಬಹಳ ದುಃಖವಾಯಿತು. ರಾವಣನು ಸಹ ಎತ್ತಲಾರದೆ ಬಿದ್ದನು. ನಂತರ ವಿಶ್ವಾಮಿತ್ರ ಮುನಿಗಳು ರಾಮುನಿಗೆ ಬಿಲ್ಲು ಎತ್ತಲು ಹೇಳಿದರು. ಆಗ ನೆರೆದ ರಾಜರು ನಗುತ್ತ " ನಮ್ಮಂಥ ಶೂರರಿಗೆ ಬಿಲ್ಲು ಏಳಲಿಲ್ಲ! ಎಲೈ ಬಾಲಕನೇ ನಿನಗೆ ಹೇಗೆ ಸಾಧ್ಯ! ಸುಮ್ಮನೆ ಸತ್ತು ಹೋದೀ! ಕೂತುಕೋ!" ಎಂದರು. ರಾಮನು ಗುರುಗಳಿಗೆ ವಂದಿಸಿ, ನಿಧಾನವಾಗಿ ಹೋಗಿ, ಬಿಲ್ಲನ್ನು ನಿಮಿಷದಲ್ಲಿ ಎತ್ತಿ ಅದನ್ನು ಮುರಿದು ಬಿಟ್ಟನು! ರಾಮನ ಸಾಹಸ ಕಂಡು ರಾಜರೆಲ್ಲ ಬೆರಗಾದರು! ಸೀತೆಯು ಬಂದು ರಾಮನ ಕೊರಳಿಗೆ ಹೂಮಾಲೆ ಹಾಕಿದಳು. ಜನಕರಾಜನು ಆನಂದಭರಿತನಾದನು, ರಾಮ - ಸೀತೆಯರ ಮದುವೆಯು ವೈಭವದಿಂದ ನಡೆಯಿತು. ಮಗನ ವೈಭವದಿಂದ ದಶರಥನು ಆನಂದದಿಂದ ನಲಿದಾಡಿದನು.

ಕಿರಿರಾಣಿ ಕೈಕಾದೇವಿಯು ಅರಮನೆಗೆ ಓಡಿಹೋದಳು! ಧಾವಿಸುತ್ತ ಓಡುವಾಗ, ಬಾಗಿಲಲ್ಲಿ ಧೊಪ್ಪನೆಬಿದ್ದಳು! "ಅಯ್ಯೋ ಭರತಾ, ಭರತಾ ನಿನ್ನ ಕುತ್ತಿಗೆ ಕೊಯ್ದರು! ಏನು ಮಾಡಲಿ, ಕೈಕಾ ಮಲಗಿಕೊಂಡಿರುವೆಯಾ; ನಿನಗೇನಾಗಿದೆ? ಕೆಟ್ಟೆನಾನು! ನೀನೂ ಹಾಳಾ ದೆಯಮ್ಮ!" ಎಂದು ಮಂಥರೆ ನುಡಿಯುತ್ತಿಲಿರು ವಾಗ ಕೈಕಾದೇವಿಯು ಎಚ್ಚರಾದಳು! ಮಂಥರೆ ಯನ್ನು ಎಬ್ಬಿಸಿ, "ಅಮ್ಮಾ ಏನಾಯಿತು, ಯಾಕೆ ಅಳುವೆ?" ಎಂದು ಕೇಳಿದಳು.

ಮಂಥರೆ: ಆಗುವದೇನಿದೆ? ಎಲ್ಲ ಹಾಳಾಯಿತು!

ಕೈಕಾ: ಅಂದರೇನು ಹೇಳು ತಾಯಿ!

ಮಂಥರೆ: ಮೋಸ ಮಾಡಿದರು ನಮಗೆ!

ಕೈಕಾ: ಮೋಸ ವೆಂದರೆ....ಏನಾಯಿತು?

ಮಂಥರೆ: ರಾಮನಿಗೆ ಪಟ್ಟಗಟ್ಟುವರು! ಇದು ಸರಿಯೇ?

ಕೈಕಾ: ಬಹಳ ಸಂತೋಷದ ಸುದ್ದಿ ಇದು! ನಿನಗೆ ಕಲ್ಯಾಣವಾಗಲಿ! ರಾಮನಿಗೆ ಮಂಗಳವಾಗಲಿ! ನಿನಗೆ ಈ ರತ್ನಹಾರ ಬಹುಮಾನ!

ಮಂಥರೆ: ಛೀ, ಹುಚ್ಚಿ! ನಿನಗೇನು ತಿಳಿ ಯುವದು? ನಿನ್ನ ಕಂದನಿಗೆ ನೀನೇ ವೈರಿಯಾಗ

ಬೇಡ ! ರಾಮನು ನಿನ್ನ ಮಗನಂತೆ ನಿನ್ನನ್ನು ನೋಡ ಲಾರನು ! ರಾಮನು ರಾಜನಾದರೆ ನೀನು ಕೌಸಲ್ಯಾ ದೇವಿಯ ಪಾದ ತೊಳೆಯಬೇಕಾದೀತು ! ತಡಮಾಡ ಬೇಡ ! ನನ್ನ ಮಾತು ಕೇಳು ! ಭರತನಿಗೆ ಪಟ್ಟ ಗಟ್ಟೆಂದು ಹಟಹಿಡಿದು ಕುಳಿತುಕೋ !

ಕೈಕಾ : ಆಂ.....ಹೀಗೇ ? ನಿನ್ನ ಮಾತು ಸರಿ ಯವ್ವ ! ರಾಜನು ನನ್ನ ಮಾತು ಕೇಳಬಹುದೇ ?

ಮಂಥರೆ : ಮೂರ್ಖೆ ! ನಾನು ಹೇಳುತ್ತೇನೆ ಕೇಳು !- ಹಿಂದೆ ಯುದ್ಧಕ್ಕೆ ಹೋದಾಗ ರಾಜನು ನಿನಗೆ ಮೂರು ವರಗಳನ್ನು ಕರುಣಿಸಿರುವನು ! ಆವರಗಳನ್ನು ಈಗಬೇಡು ! ಮೊದಲು ಹಟಮಾರಿಯಂತೆ ಕಳಿತು ಕೋ ! ನಿನ್ನ ಸೌಂದರ್ಯವೇ ನಿನ್ನನ್ನು ಕಾಯುವದು !

ಹೀಗೆ ಮಂಥರೆಯು ಹೇಳಲು ಕೈಕಾದೇವಿಯು ಹುಚ್ಚಿಯಂತೆ ಕುಳಿತಳು ! ದಾಸಿಯ ಮಾತು ಅವಳು ಮೀರುವಂತಿರಲಿಲ್ಲ ! ಯಾಕಂದರೆ ಮಂಥರೆಯೇ ಕೈಕೆಯನ್ನು ಎಳೆತನದಿಂದ ಜೋಕೆ ಮಾಡಿದ್ದಳು ! ಅವಳೇ ಅವಳಿಗೆ ತಾಯಿಯಂತೆ ಆಗಿದ್ದಳು. ಕಾರಣ ಕೈಕಾದೇವಿಯ ಸುಖವೇ ಮಂಥರೆಯ ಸುಖವಾಗಿತ್ತು !

# ಕೈಕಾದೇವಿಯು ಹಾಕಿದ ಬಲಿ (ಹಟ).

ಅತ್ತ ಅರಮನೆಯು ತುಂಬ ವೈಭವ ನಡೆದಿರಲು, ಇತ್ತ ಕೈಕಾದೇವಿಯು ತನ್ನ ಅರಮನೆಯಲ್ಲಿ ಅಳುತ್ತ ಕುಳಿತಳು! ಅವಳ ದುಃಖದ ಸುದ್ದಿ ತಿಳಿಯಲು ದಶರಥ ಮಹಾರಾಜನು ಚಿಂತೆಯಿಂದ ಬೆಂದನು! ಕೂಡಲೆ ಅವನು ರಾಣಿಯ ಅರಮನೆಗೆ ಬಂದು ನೋಡುತ್ತಾನೆ; ಕೈಕಾದೇವಿಯು ಎಲ್ಲ ವಸ್ತ್ರಾಭರಣ ಗಳನ್ನು ಅತ್ತಿತ್ತ ವಗೆದಿದ್ದಳು. ಹಳೆಯ ಸೀರೆಯನ್ನು ಉಟ್ಟುಕೊಂಡು ಅಳುತ್ತ ಕುಳಿತಿದ್ದಳು.

ದಶರಥ: ನನ್ನ ಅಕ್ಕರೆಯ ಅರಗಿಳಿಯೇ, ನಿನಗೇನಾಗಿದೆ! ಈ ದುಃಖವೇತಕೆ ಹೇಳಲಾರೆಯಾ?

ಕೈಕಾ: ಅಯ್ಯೋ ಏನು ಹೇಳಲಿ? ನಾನು ಪಾಪಿ!

ದಶರಥ: ಆಂ....ಏನಾಯಿತು? ನಿನಗೆ ನಾನೇ ನಾದರೂ ಅಪರಾಧ ಮಾಡಿರುವೆನೇ! ಇಲ್ಲವಲ್ಲ? ನೀನು ನನ್ನ ಪ್ರೀತಿಯ ರಾಣಿಯಲ್ಲವೇ? ನಿನಗೇನು ಬೇಕು! ಬೇಡಿದ್ದನ್ನು ತಂದು ಕೊಡುವೆ!

ಕೈಕಾ: ನೀವು ಕೊಡಬೇಕಾದ ವರಗಳನ್ನು ಮರೆತಿರುವಿರಿ! ಈಗ ಮತ್ತೇನು ಕೊಡುವಿರಿ?

ದಶರಥ: ಕೈಕಾ, ಕ್ಷಮಿಸು. ನನ್ನ ಪ್ರೀಯ ಮಗ ಶ್ರೀರಾಮಚಂದ್ರನ ಆಣೆ ಮಾಡಿ ಹೇಳುವೆ! ಆ ಮೂರು ವರಗಳನ್ನು ಈಗಲೇ ಕೊಡುವೆ! ಬೇಡು! ನೀನು ಹೇಳಿದಂತೆ ಕೇಳುವೆನು!

ಕೈಕಾ: ಈ ಮಾತು ನಿಜವೇ? ನೀವು ಹಿಂದಿನಿಂದ ಮರುಗಬಾರದು!

ದಶರಥ: ಇಲ್ಲ, ಇಲ್ಲ! ಕೇಳು!

ಕೈಕಾ: ೧ ನೆಯ ವರ: ನನ್ನ ಪ್ರಿಯ ಕುಮಾರನಿಗೆ ಪಟ್ಟಗಟ್ಟಬೇಕು! ೨ ನೆಯ ವರ: ರಾಮಚಂದ್ರನು ೧೪ ವರುಷ ಅಡವಿಸೇರಬೇಕು! ಮೂರನೆಯ ವರ........

ದಶರಥ: ಥೂ! ನೀಚಳೇ! ಪಾಪಿ, ಎಂಥ ವರ ಕೇಳಿದೆ! ನೀನು ನನ್ನ ಹೆಂಡತಿ ಅಲ್ಲ! ಅಯ್ಯೋ, ಮೋಸ ಹೋದೆ! ಕೈಕೆ ನೀನು ರಾಮುನನ್ನು ಅಡವಿಗೆ ಕಳಿಸಬೇಕೆಂದೆಯಾ? ಅಲ್ಲ, ಅಲ್ಲ, ನಿನ್ನ ಮಂಗಳಸೂತ್ರವನ್ನೇ ಅಡವಿಗೆ ಕಳಿಸುತ್ತಿರುವಿ! ಹಾಳಾಯಿತು-ನನ್ನ ಆಶೆ! ರಾಮು....ರಾಮು....ರಾಮು....

## ಸಿಂಹಾಸನದ ಬದಲು ವನವಾಸ.

ಕೈಕಾದೇವಿಯ ವರಗಳನ್ನು ದಶರಥನು ಕೇಳಿ 'ಹಾರಾಮಘಾತವಾಯಿತು'! ಎಂದು ನೆಲಕುರುಳಿ

ದನು! ಅಯೋಧ್ಯಾ ನಗರದತುಂಬ ದುಃಖವೇದುಃಖ! ಶ್ರೀರಾಮಚಂದ್ರನು ತಂದೆಗೆ ಕೈಮುಗಿದು ಬೇಡಿಕೊಂಡನು. " ಪೂಜ್ಯ ತಂದೆಯವರೇ, ನೀವು ಇಷ್ಟಕ್ಕಾಗಿ ಚಿಂತಿಸಬೇಡಿರಿ! ಭರತನು ನನ್ನ ಪ್ರೀತಿಯ ತಮ್ಮನು ಅವನೇ ರಾಜನಾಗಲಿ! ನಾನು ವನಸಿರಿಯ ಸೊಬಗನ್ನು ಸವಿಯಲು ಬಹು ಸಂತೋಷದಿಂದ ವನವಾಸಕ್ಕೆ ಹೋಗುತ್ತೇನೆ. ಇದು ನನ್ನ ಬಹುದಿನಗಳ ಆಶೆ ಈಡೇರಿದಂತಾಯಿತು!" ಎಂದನು. ಕೌಸಲ್ಯಾದೇವಿಯ ದುಃಖ ಹೇಳತೀರದು! ಸಿತೆಯು ತಾನೂ ವನವಾಸಕ್ಕೆ ಪತಿಯೊಡನೆ ಹೋಗಲು ಹಟಮಾಡಿದಳು! ಲಕ್ಷ್ಮಣನೂ ಅಣ್ಣನಕೂಡ ಹೊರಟನು! ಅವನು ಯಾರು ಹೇಳಿದರೂ ಕೇಳಲಿಲ್ಲ! ರಾಮನೆಂದರೆ ಅವನಿಗೆ ಪಂಚಪ್ರಾಣ! 'ಸಿಂಹಾಸನಕ್ಕಿಂತಲೂ ವನವಾಸವೇ ಮೇಲು' ಎಂದು ರಾಮ, ಸೀತೆ ಹಾಗೂ ಲಕ್ಷ್ಮಣರು ಅಯೋಧ್ಯೆಯಿಂದ ಹೊರಟರು!

## ದಶರಥನ ಮರಣ.

ತನ್ನ ಪ್ರೀತಿಯ ಮಗನು, ಸೊಸೆ ವನವಾಸಕ್ಕೆ ಹೋಗಲು ದಶರಥ ಮಹಾರಾಜನು ನೆಲಹಿಡಿದನು! ಅವನಿಗೆ ತನ್ನ ಪ್ರಾಣವೇ ಅಡವಿಸೇರಿದಂತಾಯಿತು! ಹಗಲಿರುಳು ಹಲುಬಿದನು! ದುಃಖ ಸಾಗರದಲ್ಲಿ ಮುಳುಗಿದ. ಮುಪ್ಪಿನ ರಾಜನು ಬದುಕುವದು




ಸಾಧ್ಯವೇ ? "ರಾಮಾ, ಲಕ್ಷ್ಮಣಾ, ಸೀತಾ ನನ್ನನ್ನು ಅಗಲಿ ಹೋದಿರಾ ?" ಎಂದು ಹಲುಬುತ್ತ ದಶರಥನು ಪ್ರಾಣಬಿಟ್ಟನು.

## ಭರತನಿಗಾದ ವೇದನೆ.

ನಂತರ ಮಾವನ ಮನೆಯಿಂದ ತಿರುಗಿ ಬಂದ ಭರತನು ತಂದೆಯ ಮರಣದ ದುಃಖದಿಂದಲೂ, ಅಣ್ಣಂದಿರು ವನವಾಸಕ್ಕೆ ಹೋದ ವೇದನೆಯಿಂದಲೂ ಬಳಲಿದನು ! ತನ್ನ ತಾಯಿ ಮಾಡಿದ ತಪ್ಪಿಗಾಗಿ ಭರತನು ದುಃಖಿಸಿದನು ! ಚಿಕ್ಕವನಾದರೂ ಅವನು ಜಾಣ. ಅಣ್ಣನನ್ನು ಮರಳಿ ಕರೆತರಲು ಭರತನು ಅಡವಿಗೆ ಹೋದನು.

## ಭರತನು ರಾಮನ ಪಾದುಕೆ ತಂದದ್ದು.

ನಿಪುಣನಾದ ಭರತನು 'ಚಿತ್ರಕೂಟ' ವನದಲ್ಲಿರುವ 'ಪರ್ಣಕುಟೀರ' ದಲ್ಲಿರುವ ಶ್ರೀರಾಮನತ್ತ ಸಕಲ ಸೇನೆಯೊಡನೆ ಹೋದನು. ರಾಮ, ಲಕ್ಷ್ಮಣ, ಸೀತೆ ಎಲ್ಲರೂ ಭರತನನ್ನು ಕಂಡು ಹಿಗ್ಗಿದರು. ತಮ್ಮನಿಂದ ತಂದೆಯ ಮರಣದ ಸಂಗತಿ ತಿಳಿದು ಅವರು ದುಃಖಿಸಿದರು. ಭರತನಿಗೆ ಸರಿಯಾದ ರೀತಿಯಿಂದ ರಾಜ್ಯಭಾರ ಮಾಡಲು ಹೇಳಿದರು. ಆದರೆ ಭರತನು ಅಣ್ಣಂದಿರ ಪಾದಗಳ ಮೇಲೆ ಬಿದ್ದು ಬೇಡಿಕೊಂಡನು.

ಶ್ರೀರಾಮನು ತಿರುಗಿ ಬರಲು ಒಪ್ಪಲಿಲ್ಲ! ತಂದೆ-ತಾಯಿಗಳ ಮಾತು ಮೀರಬಾರದೆಂದೂ, ಮೀರಿದರೆ ಜಯವಾಗದೆಂದೂ ಭರತನಿಗೆ ಹೇಳಿದನು. ಆಗ ಭರತನು ರಾಮಚಂದ್ರನ ಪಾದುಕೆಗಳನ್ನು ತೆಗೆದುಕೊಂಡು ಬಂದು, ಸಿಂಹಾಸನದ ಮೇಲೆ ಅವನ್ನು ಇಟ್ಟು ಪೂಜಿಸುತ್ತ ವೈಭವದಿಂದ ರಾಜ್ಯವಾಳ ತೊಡಗಿದನು.

## 'ಶೂರ್ಪನಖಿ'ಯ ಅಪಮಾನ.

ಶ್ರೀರಾಮ, ಲಕ್ಷ್ಮಣ, ಸೀತೆ ಮೂವರೂ ನಿಸರ್ಗದ ಅಗಾಧವಾದ ಸೌಂದರ್ಯ ನೋಡುತ್ತ ಸುಖದಿಂದ ಇದ್ದರು. ಬಲಾಢ್ಯನಾದ ಲಕ್ಷ್ಮಣನು ಅಣ್ಣ-ಅತ್ತಿಗೆಯರಿಗೆ ಏನೂ ತೊಂದರೆಯಾಗದಂತೆ ಕಾವಲುಗಾರನಾಗಿರುತ್ತಿದ್ದನು. ಮೂವರ ದೇಹಗಳು ಬೇರೆ ಬೇರೆ ಯಾದರೂ ಮೂವರ ಮನಸುಗಳು ಒಂದಾಗಿದ್ದವು. ಒಂದು ದಿವಸ ಮೂವರೂ ಹರಟೆ ಹೊಡೆಯುತ್ತ ಕುಳಿತಿರುವಾಗ 'ಶೂರ್ಪನಖಿ' ಎಂಬ ರಾಕ್ಷಸಿಯು ವಯ್ಯಾರ ಮಾಡುತ್ತ ಬಂದಳು.

ಶೂರ್ಪನಖಿ: ಶ್ರೀರಾಮ ನಿನ್ನ ರೂಪಕ್ಕೆ ನಾನು ಮರುಳಾದೆ! ನನ್ನನ್ನು ಮದುವೆಯಾಗು!

ರಾಮ: ಹಹಹ! ನನ್ನ ಮದುವೆಯಾಗಿದೆ! ಇದೋ, ನೋಡು! ಇವಳೇ ನನ್ನ ಹೆಂಡತಿ-ಸೀತೆ.

ಬೇಕಾದರೆ ನನ್ನ ತಮ್ಮನನ್ನು ಕೇಳು.
( ಎಂದು ರಾಮನು ನಕ್ಕನು )

ಶೂರ್ಪನಖಿ: ಲಕ್ಷ್ಮಣಾ, ನೀನು ಸುಂದರ ನಿರುವಿ. ನನ್ನನ್ನು ಮದುವೆಯಾಗು. ನಾನು ಬಹಳ ಚೆಲುವೆ!

ಲಕ್ಷ್ಮಣ: ನೀಚಳೇ ತೊಲಗು!
( ಎಂದು ನಕ್ಕನು )

ಶೂರ್ಪನಖಿ: ಎಲೈ ಪಾಪಿಗಳೇ, ನನ್ನನ್ನು ನೋಡಿ ನಗುವಿರಾ? ಹೂಂ, ನಾನು ಈ ಸೀತೆ ಯನ್ನು ಕೊಂದು ಬಿಟ್ಟರೆ ನೀವಾಗಿಯೇ ನನ್ನನ್ನು ಮಾಡಿಕೊಳ್ಳುವಿರಿ! ಎಲೆ ಸೀತೆ.... ಎಂದು ಚೀರುತ್ತ ಆ ರಾಕ್ಷಸಿಯು ಸೀತೆಯನ್ನು ಕೊಲ್ಲಲು ಹೋದಳು. ಲಕ್ಷ್ಮಣನು ತಡೆಯದೆ ಆ ನೀಚ ರಾಕ್ಷಸಿ ಯನ್ನು ಹಿಡಿದು, ಕಿವಿ, ಮೂಗು ಕೊಯ್ದನು! ಕೇಳುವ ದೇನು! ಅವಳು ಚೀರುತ್ತ, ಅಳುತ್ತ ಓಡಿ ಹೋದಳು! ಅವಳು ಅಳುವದು ಎರಡು ಹರದಾರಿ ಗಳ ಮೇಲಿಂದ ಕೇಳಿಬರುತಿತ್ತು!

## ರಾವಣನ ಕೋಪ.

ಶೂರ್ಪನಖಿಯು ರಾಕ್ಷಸಿಯಲ್ಲವೇ! ಅವಳು ತನಗಾದ ಅಪಮಾನ ಹಾಗೂ ನೋವಿನಿಂದ ಬಳಲುತ್ತ ಲಂಕಾ ಪಟ್ಟಣಕ್ಕೆ ಹೋದಳು. ಅವಳ ಹಿರಿಯ

ಅಣ್ಣನಾದ ರಾವಣನು ಮಹಾ ಅಭಿಮಾನಿಯು. ರಾಕ್ಷಸರ ಒಡೆಯನು. ಅವನು ಲಂಕೆಯ ರಾಜನಾಗಿದ್ದನು. ತಂಗಿಯಾದ ಶೂರ್ಪನಖಿಗೆ ಆದ ಅಪಮಾನ ಕಂಡು, ಅವಳಿಂದ ಎಲ್ಲ ಸಮಾಚಾರ ಕೇಳಿ ರಾವಣನು ಕುದಿದನು! ಅವನಿಗೆ ಬಹಳ ಸಂಕಟವಾಯಿತು! ಆ ಸೇಡು ತೀರಿಸಿಕೊಳ್ಳಬೇಕೆಂದು ನಿಶ್ಚಯಿಸಿದನು! ಕೂಡಲೆ ಅವನು ತನ್ನ ಮಾವನಾದ 'ಮಾರೀಚ'ನ ಬಳಿ ಹೋದನು. "ನೀನು ಬಗೆ ಬಗೆಯ ರೂಪು ತಾಳುವವನು. ಹೇಗಾಗದರೂ ಮಾಡಿ ನಾನು ಸೇಡು ತೀರಿಸಿಕೊಳ್ಳಬೇಕಾಗಿದೆ! ಸೀತೆಯನ್ನು ಕದ್ದು ತರುತ್ತೇನೆ! ಅಲ್ಲಿಯವರೆಗೆ ನನಗೆ ಸಮಾಧಾನವಿಲ್ಲ! ನೀನು ಈಗಲೇ ಬಂಗಾರ ಬಣ್ಣದ ಜಿಗರೆಯ ವೇಷತಾಳು! ಸೀತೆಯ ಮುಂದೆ ಸುಳಿದಾಡು!" ಎಂದು ಹೇಳಿದನು. ಮಾರೀಚನು ರಾಮನ ಶೌರ್ಯ ಬಲ್ಲವನಾದರೂ ಅಳಿಯನ ಮಾತು ಮೀರಿ ಬದುಕುವಂತಿರಲಿಲ್ಲ! ಕಾರಣ ಅವನ ಮಾತಿಗೆ ಒಪ್ಪಿಕೊಂಡನು!

## ರಾವಣನು ಸೀತೆಯನ್ನು ಕದ್ದೊಯ್ದ!

ರಾಮ, ಲಕ್ಷ್ಮಣರು ತಮ್ಮ ಎಲೆಮನೆಯಲ್ಲಿ ಕುಳಿತಿದ್ದರು. ಸೀತೆಯು ಹೊರಗಡೆ ಏನೋ ನೋಡುತ್ತ ನಿಂತಿದ್ದಳು. ಆಗ ಅವಳು ಲಗುಬಗೆ

ಯಿಂದ "ನಾಥಾ, ಅಲ್ಲಿ ನೋಡಿರಿ! ಬಂಗಾರ ಬಣ್ಣದ ಚಿಗರೆಯು ಹೇಗೆ ನಿಂತಿದೆ! ಅದರ ಸೌಂದರ್ಯ ನೋಡಿ ನಾನು ಮೋಹಿತಳಾಗಿರುವೆ! ನನಗೆ ಅದನ್ನು ಸಾಕುವಂತಾಗಿಸಿ ತಂದು ಕೊಡಿರಿ!" ಎಂದು ರಾಮನಿಗೆ ಕೇಳಿದಳು. ಆಗ ರಾಮ-ಲಕ್ಷ್ಮಣರು "ಇದು 'ಕಪಟಿ ವೇಷದ ಚಿಗರೆ' ಯಂತೆ ಕಾಣು ವದು. ಇದನ್ನು ಸಾಕುವದು ಬೇಡ!" ಎಂದು ಹೇಳಿದರು. ಸೀತೆ ಮಾತ್ರ ತನ್ನ ಹಟ ಬಿಡಲಿಲ್ಲ. ಕೊನೆಗೆ ರಾಮನು ಆ ಚಿಗರೆಯನ್ನು ಹಿಡಿದು ತರಲು ಸಿದ್ಧನಾದನು! ಚಿಗರೆಯು ಗಾಳಿಯ ವೇಗದಿಂದ ಓಡತೊಡಗಿತು! ರಾಮನು ಬೆನ್ನು ಹತ್ತಿದನು. ಸೀತೆ-ಲಕ್ಷ್ಮಣರು ನೋಡುತ್ತ ನಿಂತರು! ತುಸು ಹೊತ್ತಿನಲ್ಲಿ ಚಿಗರೆಯನ್ನು ಹಿಡಿಯಲು ಹೋದ ರಾಮನು ಮರೆಯಾದನು! ಮಾಯಾ ರೂಪದ ಚಿಗರೆಯು ಬಹು ದೂರ ಒಯ್ದಿತು! ರಾಮನು ಒಂದು ಬಾಣ ಬಿಟ್ಟನು! ಆ ಬಾಣದಿಂದ ಚಿಗರೆಯು ನೆಲಕುರುಳುತ್ತ "ಹಾ ಸೀತೆ, ಹಾ ಲಕ್ಷ್ಮಣ" ಎಂದು ಚೀರಿತು! ತನ್ನ ಪತಿಯೇ ಹಾಗೆ ಕೂಗಿದನೆಂದು ಸೀತೆಯು ಇತ್ತ ಅಳತೊಡಗಿದಳು! ಮೈದುನನು ಸಮಾಧಾನ ಹೇಳಿದರೂ ಅವಳು ಶಾಂತವಾಗಲಿಲ್ಲ! "ಲಕ್ಷ್ಮಣಾ, ನನ್ನ ದೇವರಿಗೆ ಏನೋ ಆಗಿರಬೇಕು! ನೀನು ಕೂಡಲೆ ಹೋಗು! ಇಲ್ಲಿ ನಿಲ್ಲದಿರು ನಡೆ! ನನ್ನ

ಗಂಡನನ್ನು ರಕ್ಷಿಸು ಹೋಗು ! " ಎಂದು ಸೀತೆ ನುಡಿಯಲು ಲಕ್ಷ್ಮಣನು "ರಾಮನಿಗೆ ಯಾರು ಏನೂ ಮಾಡಲಾರರು ! ಅವನು ದೇವರಂತಿದ್ದಾನೆ ! " ಎಂದು ಹೇಳಿದರೂ ಸೀತೆ ಕೇಳಲಿಲ್ಲ. ಆಗ ಲಕ್ಷ್ಮಣನು ಅತ್ತಿಗೆಯ ಮಾತು ಮೀರ ಬಾರದೆಂದು ತಿಳಿದು ಮನೆಯ ಮುಂದೆ ಏಳು ಮಂಡಲ ಕೊರೆದನು! ಮಂಡಲಗಳಿಗೆ ಮಂತ್ರ ಹಾಕಿದನು. "ಈ ಏಳು ಮಂಡಲಗಳನ್ನು ದಾಟಿ ಹೊರಗೆ ಹೊಗಬೇಡಿರಿ! ಯಾರಾದರೂ ಇವನ್ನ ತುಳಿದು ಬಂದರೆ ಸುಟ್ಟು ಹೋಗುವರು ! " ಎಂದು ಹೇಳಿ, ರಾಮನನ್ನು ಹುಡುಕುತ್ತ ಹೋದನು.

ಲಕ್ಷ್ಮಣನು ಮರೆಯಾದ ಕೂಡಲೆ ಸನ್ಯಾಸಿಯ ವೇಷ ತಾಳಿದ ರಾವಣನು : " ಭಿಕ್ಷೆ ನೀಡಿರಮ್ಮಾ ಽ " ಎಂದು ಸೀತೆಯನ್ನು ಕೂಗಿದನು. ಸೀತೆಯು ದೂರ ನಿಂತು ಭಿಕ್ಷೆ ನೀಡುವಂತಿರಲಿಲ್ಲ! ಏಳು ಮಂಡಲಗಳನ್ನು ದಾಟಿ ಹೋದಳು! ರಾವಣನು ಅವಳನ್ನು ಹಿಡಿದು, 'ಪುಷ್ಪ ವಿಮಾನ' ದಲ್ಲಿ ಕುಳಿತುಕೊಂಡು ಆಕಾಶಮಾರ್ಗವಾಗಿ ಲಂಕೆಗೆ ತೆರಳಿದನು.

## ಜಟಾಯುವಿನ ಮರಣ.

'ಜಟಾಯು' ಎಂದರೆ ಪಕ್ಷಿಮಾನವ. ರಾವಣನು ಸೀತೆಯನ್ನು ಒಯ್ಯುವಾಗ 'ಜಟಾಯು'

ದಾರಿಯಲ್ಲಿ ತಡೆದು : " ನೀಚ ರಾವಣನೇ, ಸೀತಾ ಮಾತೆಯನ್ನು ಬಿಡು ! " ಎಂದು ಹೋರಾಡಿದನು. ನೀಚ ರಾವಣನು ಕತ್ತಿಯಿಂದ ಜಟಾಯುವಿನ ಒಂದು ಪಕ್ಕವನ್ನು ಕಡಿದೊಗೆದನು ! ಜಟಾಯುವು ' ರಾಮ ರಾಮ ' ಎಂದು ಹಲುಬುತ್ತ ಬಿದ್ದನು. ಅಷ್ಟರಲ್ಲಿ ರಾಮ ಲಕ್ಷ್ಮಣರು ಮಾರೀಚನನ್ನು ಸಂಹಾರ ಮಾಡಿ, ಅದೇ ದಾರಿಯಿಂದ ಬರಲು ಜಟಾಯುವನ್ನು ನೋಡಿದರು ! ನಡೆದ ಕತೆಯನ್ನು ಜಟಾಯು ರಾಮನಿಗೆ ತಿಳಿಸಿ ಪ್ರಾಣ ಬಿಟ್ಟನು ! ರಾಮನಿಗೆ ಅಪಾರ ದುಃಖವಾಯಿತು !

## ಸುಗ್ರೀವನೊಡನೆ ಗೆಳೆತನ.

ಸೀತೆಯನ್ನು ಅಗಲಿದ ರಾಮನಿಗೆ ಸಮಾಧಾನವೆಲ್ಲಿ? ಅವನು ಕೂಸಿನಂತೆ ದುಃಖಿಸಿದನು ! ಹುಲಿಯಂತೆ ಅರ್ಭಟಿಸಿದನು ! ರಾವಣನಿಂದ ಸೀತೆಯನ್ನು ತರುವ ಉಪಾಯ ಹುಡುಕಬೇಕಾಯಿತು. ಯಾಕಂದರೆ ಲಂಕಾನಗರ ಇರುವದು ಸಮುದ್ರ ಆಚೆಗೆ ! ಲಂಕಾನಗರದ ಸುತ್ತು ಸಮುದ್ರ - ವಿತ್ತು ಹೀಗಾಗಿ ರಾಮ ಲಕ್ಷ್ಮಣರಿಗೆ ಬಹಳ ಚಿಂತೆಯಾಯಿತು !

ರಾಮ ಲಕ್ಷ್ಮಣರು ' ಕಿಷ್ಕಿಂಧಾ ' ಎಂಬ ಪಟ್ಟಣಕ್ಕೆ ಬಂದರು. ಅಲ್ಲಿ ವಾನರ ಅರಸನಾದ ' ವಾಲಿ ' ಎಂಬವನು ರಾಜನಿದ್ದನು. ವಾಲಿ ರಾಜನಿಗೆ

'ಸುಗ್ರೀವ' ಎಂಬ ತಮ್ಮನಿದ್ದನು. ಅಣ್ಣತಮ್ಮಂದಿರು ಜಗಳಾಡಿದ್ದರು. ಶೂರನಾದ ವಾಲಿಯು ತಮ್ಮನ ಹೆಂಡತಿಯನ್ನು ಅಪಹರಿಸಿ, ತಮ್ಮನಾದ ಸುಗ್ರೀವನನ್ನು ಹೊರಗೆ ಹಾಕಿದ್ದನು! ಹೀಗಾಗಿ ಸುಗ್ರೀವನು 'ಹನುಮಂತ' ನೆಂಬ ವೀರ ಸೇನಾಪತಿಯೊಡನೆ ಕಾಡಿನಲ್ಲಿ ಇದ್ದನು. ರಾಮ-ಲಕ್ಷ್ಮಣರಿಗೆ ಮೊದಲು ಹನುಮಂತನು ಭೆಟ್ಟಿಯಾದನು. ಮೂವರ ಪರಿಚಯವಾಯಿತು! ಆಮೇಲೆ ಸುಗ್ರೀವ-ವಾಲಿಗಳ ಜಗಳವನ್ನೂ, ವಾಲಿಯು ಮಾಡಿದ ಪಾಪವನ್ನೂ ಹನುಮಂತನು ತಿಳಿಸಿದನು! 'ನೀವು ಸುಗ್ರೀವನಿಗೆ ಸಹಾಯ ಮಾಡುವದಾದರೆ, ಸುಗ್ರೀವನು ನಿಮಗೆ ಸಹಾಯ ಮಾಡುವನು' ಎಂದು ಹನುಮಂತನು ಹೇಳಲು ರಾಮ-ಲಕ್ಷ್ಮಣರು ಒಪ್ಪಿದರು!

## ವಾಲಿಯ ವಧೆ.

ಅಣ್ಣನಿಂದ ಅಪಮಾನ ಹೊಂದಿದ ಸುಗ್ರೀವನು ಶ್ರೀರಾಮ-ಲಕ್ಷ್ಮಣರ ಸಹಾಯ ಸಿಗಲು ಹಿಗ್ಗಿದನು. ಅವನು ವಾಲಿಯನ್ನು ತಾನಾಗಿಯೇ ಕೆಣಕಿದನು! ಆಗ ವಾಲಿಯು ಗದೆಯಿಂದ ತಮ್ಮನನ್ನು ಕೊಲ್ಲಲು ಸಿಂಹದಂತೆ ಗರ್ಜಿಸುತ್ತ ಬಂದನು! ನೋಡುತ್ತ ನಿಂತ ರಾಮನು ವಾಲಿಯನ್ನು ಒಂದೇ ಬಾಣದಿಂದ ಸಂಹಾರ ಮಾಡಿದನು! "ತಮ್ಮನ ಹೆಂಡತಿಯನ್ನು

ಕಾಮಿಸಿದ ಪಾಪಿಯೇ ನಿನಗೆ ಇದೇ ಪ್ರಾಯಶ್ಚಿತ" ಎಂದು ರಾಮನು ನುಡಿಯಲು ವಾಲಿಯು ಕ್ಷಮೆ ಬೇಡಿ ಪ್ರಾಣ ಬಿಟ್ಟನು. ವಾಲಿಯು ತೀರಿಕೊಂಡ ನಂತರ ಸುಗ್ರೀವನು ರಾಜನಾದನು! ವಾಲಿಯ ಕುಮಾರನಾದ 'ಅಂಗದ' ನು ಯುವರಾಜ ನಾದನು. ಲಂಕೆಯಲ್ಲಿ ಸೀತೆಯನ್ನು ಹುಡುಕಲು ಸುಗ್ರೀವನು ತನ್ನ ಸೇನಾಪತಿಯಾದ ಹನುಮಂತನನ್ನು ಕಳಿಸಿದನು. ಹೋಗುವಾಗ ಶ್ರೀರಾಮನು ತನ್ನ ಗುರುತೆಂದು ಕೈಯೊಳಗಿನ ಉಂಗುರವನ್ನು ಕೊಟ್ಟು ಕಳಿಸಿದನು.

## ಲಂಕೆಗೆ ಹನುಮಂತನ ಪ್ರಯಾಣ.

ಹನುಮಂತನು ಹಿಡಿದ ಕೆಲಸವನ್ನು ಮನ ಮುಟ್ಟಿ ಮಾಡುವಂಥ ಧೀರನು. ಲಂಕೆಗೆ ಹೋಗಲು ಅವನಿಗೆ ಸಾಧ್ಯವಾಗುವಂತೆ ಇತರರಿಗೆ ಸಾಧ್ಯವಿರಲಿಲ್ಲ. ಅವನು ಪರ್ವತದ ಶಿಖರನನ್ನು ಏರಿ, ಅಲ್ಲಿಂದ ಸಮುದ್ರದಲ್ಲಿ ಜಿಗಿದನು! ಒಂದು ಜಿಗತಕ್ಕೆ ಹತ್ತಾರು ಮೈಲು ಹಾರುವಂಥವನು! ಸ್ವಲ್ಪ ವೇಳೆ ಈಸುತ್ತ ಹೋದನು ಮತ್ತೊಮ್ಮೆ ನಡುಗಡ್ಡೆಯಿಂದ ಒಂದೆ ನೆಗತದಿಂದ ದಂಡೆಗೆ ಹೋದನು.

## ಸೀತೆಯ ಶೋಧ.

ಇನ್ನು ಲಂಕಾ ನಗರದ ಸೌಂದರ್ಯವನ್ನು ವರ್ಣಿಸುವದು ಸಾಧ್ಯವೇ? ಹನುಮಂತನು ಆ

ನಗರದ ಬಂಗಾರದ ಮನೆಗಳನ್ನು ನೋಡಿ ಬೆರಗಾದನು! ರಾವಣನ ಅರಮನೆಯಂತೂ ಹತ್ತು ಮೈಲು ದೂರದಿಂದಲೇ ಕಾಣುವಂತಹದು; ಅಷ್ಟು ಎತ್ತರ. ಅದು ರತ್ನಖಚಿತವಾದ ಅರಮನೆ! ಅಲ್ಲಿಯ ಸೌಂದರ್ಯ ನೋಡುತ್ತ ಹನುಮಂತನು ರಾವಣನ ಅರಮನೆಯನ್ನು ಹೊಕ್ಕನು! ಭದ್ರವಾದ ಕಾವಲಿದ್ದರೂ ಅಲ್ಲಿಂದ ಹಾರಿ, ಇಲ್ಲಿಂದ ಜಿಗಿದು-ತೀರ ಸಣ್ಣ ರೂಪ ತಾಳಿ ಒಳಸೇರಿದನು! ಆಗ ಮಧ್ಯ ರಾತ್ರಿಯ ಸಮಯ ಬೇರೆ! ಅರಮನೆಯನ್ನೆಲ್ಲ ಹುಡುಕಿದನು! ರಾವಣನು ಸುಖ ನಿದ್ರೆಯಲ್ಲಿದ್ದನು! ಅವನ ರಾಣಿಯರಲ್ಲಿಯೂ ಸೀತೆ ಕಾಣಲಿಲ್ಲ! ನಂತರ ಹನುಮಂತನು ನಗರದ ಮನೆಮನೆಗಳನ್ನು ಹೊಕ್ಕು ಹುಡುಕಾಡಿದನು! ಅಲ್ಲಿ ಎಲ್ಲಿಯೂ ಸೀತಾಮಾತೆ ಇರಲಿಲ್ಲ. ಕಡೆಗೆ ಊರ ಹೊರಮಗ್ಗಲಿನ 'ಅಶೋಕವನ'ದ ಕಡೆಗೆ ನಡೆದನು ಅಲ್ಲಿ ಸಾವಿರಾರು ಜನ ರಾಕ್ಷಸರು ಕಾವಲಿದ್ದರು, ಎಲ್ಲರೂ ತೂಕಡಿಸುತ್ತಿದ್ದರು! ಕೆಲವರು ಮಲಗಿದ್ದರು. ಸೀತಾದೇವಿಯು ಚಿಂತೆಯಲ್ಲಿ ಕುಳಿತಿದ್ದನ್ನು ಈತನು ನೋಡಿದನು! ಆಗ "ರಾಮ, ರಾಮ ರಾಮ" ಎಂದು ನುಡಿಯಲು 'ಸೀತೆ'ಯು ನೋಡಿದಳು. ಮಂಗನು ರಾಮಧ್ಯಾನ ಮಾಡುವದೆ ಆಕೆಗೆ ಅಗಾಧವಾಗಿ ಕಂಡಿತು! ಇದು, ಏನೋ ಮೋಸವಿರಬೇಕೆಂದು ಸೀತೆ ಹೌಹಾರಿದಳು!

ಆಗ ಹನುಮನು ಶ್ರೀರಾಮನು ಕೊಟ್ಟ ಉಂಗುರವನ್ನು ಸೀತೆಗೆ ಕೊಡಲು, ಆಕೆಗೆ ಆನಂದವಾಯಿತು. ಹನುಮಂತನು ತಾನು ಬಂದ ಕಾರಣವನ್ನು ತಿಳಿಸಿದನು. ರಾಮ ಲಕ್ಷ್ಮಣರ ಕುಶಲವಾರ್ತೆಯನ್ನು ತಿಳಿದು ಸೀತೆಗೆ ಬಹಳ ಹರುಷವಾಯಿತು. "ಇನ್ನು ಕೆಲವು ದಿನಗಳಲ್ಲಿ ರಾವಣನನ್ನು ಕೊಂದು, ಯುದ್ಧ ಹೂಡಿ, ನಿಮ್ಮನ್ನು ಕರೆದೊಯ್ಯಲು ರಾಮದೇವರು ಆತುರರಾಗಿರುವರು" ಎಂದು ಹನುಮನು ಹೇಳಿ, ಅವಳಿಂದ ಗುರುತಿಗಾಗಿ 'ಚೂಡಾಮಣಿ' ಯನ್ನು ತೆಗೆದುಕೊಂಡು ಹೊರಟನು.

### ಲಂಕಾನಗರಕ್ಕೆ ಬೆಂಕಿಹತ್ತಿತು.

ಹನುಮಂತನು ಸೀತಾಮಾತೆಯ ಭೆಟ್ಟಿಯ ನಂತರ ವನದಲ್ಲಿಯ ಗಿಡಗಳನ್ನು ಕಿತ್ತಿ ನಾಶಮಾಡಿದನು! ಹಣ್ಣು-ಹಂಪಲು ತಿಂದು ತೇಗಿದನು! ಆಗ ರಾಕ್ಷಸರು ಹನುಮಂತನನ್ನು ಪೀಡಿಸತೊಡಗಿದರು! ಕೈಗೆ ಕೈ ಹತ್ತಿತು! ಭಯಂಕರ ಯುದ್ಧವದು! ನೂರಾರು ರಾಕ್ಷಸರನ್ನು ಬಾಲದಿಂದ ಬಿಗಿದು ಕೊಂದನು! ಅನೇಕರನ್ನು ಗದೆಯಿಂದ ಹೊಡೆದು ಸಂಹರಿಸಿದನು! ಈ ಸುದ್ದಿ ರಾವಣನಿಗೆ ತಿಳಿಯಿತು. ಕೆಲವರು ಹನುಮಂತನನ್ನು ಹಿಡಿದು ರಾಜನ ಬಳಿ ಒಯ್ಯಬೇಕೆಂದರು! ಹನುಮಂತನು 'ನೋಡೋಣ' ವೆಂದು ಬೇಕಂತೆ ಅವರ ಕೈಗೆ ಸಿಕ್ಕನು.

ರಾವಣನು ಕಪಿಯ ಸಾಹಸ ಕಂಡು ಬೆರಗಾದನು ! ಅವನು ದೊಡ್ಡದಾದ ಸಿಂಹಾಸನದ ಮೇಲೆ ಕುಳಿತಿದ್ದನು ! ಆಗ ಹನುಮನು ತನ್ನ ಬಾಲವನ್ನು ಸುರುಳಿಮಾಡಿ ಅವನಿಗಿಂತ ಎತ್ತರವಾಗಿ ಕುಳಿತನು. ಆಗ ರಾವಣನು "ಈ ಕಪಿಯ ಬಾಲಕ್ಕೆ ಬೆಂಕಿ ಹಚ್ಚಿರಿ" ಎಂದು ತಿಳಿಸಿದನು. ಆಗ ಹನುಮಂತನ ಬಾಲಕ್ಕೆ ಅರಿವೆ ಸುತ್ತಿ, ಎಣ್ಣೆ ಸುರಿದು ಬೆಂಕಿ ಹಚ್ಚಿದರು ! ಅವನಿಗೂ ಅಷ್ಟೇ ಬೇಕಾಗಿತ್ತು ! ಕೇಳುವದೇನು ? ಕಪಿಯು ಇನ್ನು ಸಾಯುವದೆಂದು ನಂಬಿದ್ದರು ! ಹನುಮಂತನು ತನ್ನ ಬಾಲವನ್ನು ಬೆಳೆಸಿದನು! ರಾಕ್ಷಸರ ಮುಖಕ್ಕೆ ಬೆಂಕಿ ಹಚ್ಚಿದನು ! ಅನೇಕ ರಾಕ್ಷಸರು ಗೋಳಾಡಿ ಸತ್ತುಹೋದರು ! ನಂತರ ಅವನು ಮನೆಯಿಂದ ಮನೆಗೆ ನೆಗೆಯುತ್ತ - ಜಿಗಿದಾಡುತ್ತ ಲಂಕಾನಗರವನ್ನು ಸುಡತೊಡಗಿದನು ! ಮನೆಗಳೆಲ್ಲ ಧಗಧಗನೆ ಉರಿಯತೊಡಗಿದವು ! ನಗರದಲ್ಲಿ ಹಾಹಾಕಾರವೇ ಹಾಹಾಕಾರ ! ಮನೆಗಳೆಲ್ಲ ನೆಲಸಮಾನವಾದವು ! ರಾವಣನು ಹನುಮಂತನ ಪರಾಕ್ರಮಕ್ಕೆ ಅಂಜಿದನು ! ಹತ್ತಿದ ಉರಿಯನ್ನು ನಂದಿಸುವದು ಆಗಲಿಲ್ಲ ! ಜನರು ಊರು ಬಿಟ್ಟು ಓಡಿಹೋಗಿ ಬದುಕುವದೇ ಕಠಿಣವಾಯಿತು ! ಅಷ್ಟರಲ್ಲಿ ಹನುಮಂತನು ಸಮುದ್ರದಲ್ಲಿ ಜಿಗಿದನು ! ಆನಂದದಿಂದ ರಾಮ - ಲಕ್ಷ್ಮಣರ ಕಡೆಗೆ ಹೋದನು.




## ಸಮುದ್ರಕ್ಕೆ ಸೇತುವೆ ಕಟ್ಟಿದರು.

ಲಂಕಾನಗರವನ್ನು ಸುಟ್ಟು, ಸೀತೆಯ ಸಂದೇಶದೊಡನೆ ಹನುಮಂತನು ಬರಲು ವಾನರ ಸೇನೆಯು ಹರುಷಗೊಂಡಿತು. ರಾಮ - ಲಕ್ಷ್ಮಣರು ಆನಂದ ಭರಿತರಾದರು. ಸುಗ್ರೀವನು ಹನುಮಂತನ ಸಾಹಸಕ್ಕೆ ಮೆಚ್ಚಿದನು.

ಇನ್ನು ರಾವಣನೊಡನೆ ಅವರು ಯುದ್ಧದ ತಯಾರಿ ನಡೆಸಿದರು. ಇವರ ದಂಡು ಲಂಕಾನಗರವನ್ನು ಸೇರಬೇಕಲ್ಲವೇ? ಅದರ ಸಲುವಾಗಿ ಸಮುದ್ರವನ್ನು ದಾಟುವ ಬಗೆ ಹೇಗೆಂದು ಚಿಂತಿಸಿದರು. ಅನಂತ ವಾನರಸೇನೆ ಕೂಡಲೆ ಸಮುದ್ರಕ್ಕೆ ಸೇತುವೆ ಕಟ್ಟಲು ಅಣಿಯಾದರು! ಗುಡ್ಡಗಳನ್ನೇ ಕಿತ್ತು ತಂದು ಇಡಹತ್ತಿದರು! ಬಹು ಹುರುಪಿನಿಂದ ವಾನರರು ದುಡಿದರು. ಸೇತುವೆಯು ಸಿದ್ಧವಾದೊಡನೆ ಜಯ ಜಯಕಾರ ಮಾಡುತ್ತ ವಾನರರು ಲಂಕಾನಗರ ಹೊಕ್ಕರು. ಆಗ ರಾವಣನ ತಮ್ಮನಾದ 'ವಿಭೀಷಣ'ನು ರಾಮನೊಡನೆ ಯುದ್ಧ ಬೇಡವೆಂದು ಅಣ್ಣನಿಗೆ ತಿಳಿಹೇಳಿದನು! ರಾವಣನು ಕೇಳಿಯಾನೇ? ಅವನೂ ಯುದ್ಧ ಮಾಡಲು ತಯಾರಾದನು. ಸತ್ಯವಂತನೂ, ವಿನಯಶೀಲನೂ ಆದ ವಿಭೀಷಣನು ನಿರುಪಾಯನಾಗಿ ರಾಮನ ಕಡೆಗೆ ಬಂದನು.

# ಘನ ಘೋರ ಕಾಳಗ.

ರಾವಣನ ರಾಕ್ಷಸ ಸೈನಿಕರಿಗೂ ಶ್ರೀರಾಮನ ವಾನರ ದಂಡಿನವರಿಗೂ ಹೊಡೆದಾಟ ಸುರುವಾಯಿತು ರಕ್ತದ ಕಾಲುವೆಯೇ ಹರಿಯತೊಡಗಿತು! ವಾನರರು ತಮ್ಮ ಬಾಲದಿಂದ ರಕ್ಕಸರನ್ನು ಎಳೆದೆಳೆದು ಕೊಂದರು. ಅನೇಕ ರಕ್ಕಸರು ವಾನರರನ್ನು ಹಿಡಿದು, ಸೀಳಿ ತಿಂದರು! ಶೂರರಾದ ವಾನರರ ಸಾಹಸ ನೋಡುವಂತಹದು. ರಾವಣನ ನೂರು ಪಾಲು ದಂಡು ತೀರಿಹೋಯಿತು! ಆಗ ಸ್ವತಃ ರಾವಣನೇ ಯುದ್ಧಭೂಮಿಗೆ ಬಂದು ಹೋರಾಡತೊಡಗಿದನು. ರಾವಣನ ಬಾಣಗಳ ಸುರಿಮಳೆಯಿಂದ ಸಾವಿರಾರು ವಾನರರು ಸತ್ತು ಹೋದರು! ಉಳಿದ ವಾನರರು ಗಾಬರಿಯಾದರು! ಆಗ ರಾಮನು ತಾನೂ ರಾವಣನಿಗೆ ಎದುರಾಗಿ ನಡೆದನು. ರಾವಣನು ರಥವೇರಿ ಬಂದಿದ್ದನು. ರಾಮನಿಗೆ ರಥವಿರಲಿಲ್ಲ. ಅವನು ಶೂರ ಹನುಮಂತನ ಹೆಗಲಮೇಲೆ ಕುಳಿತು ಯುದ್ಧ ಮಾಡತೊಡಗಿದನು. ರಾಮನ ಭಯಂಕರವಾದ ಬಾಣಗಳಿಂದ ರಾಕ್ಷಸರು ದಿಕ್ಕುಪಾಲಾಗಿ ಓಡಿದರು! ರಾವಣನಿಗೂ ಒಂದು ಬಾಣವು ಬಡಿಯಿತು! ಆಗ ಅವನು ಅಂಜಿಕೊಂಡು ಅರಮನೆಗೆ ಓಡಿದನು! ಎಂದೂ ಸೋಲು ಅರಿಯದ ರಾವಣನಿಗೆ ಎದೆಯೊಡೆ

ಯಿತು ! ಮುಂದೇನು ಮಾಡಬೇಕೆಂದು ಅವನು ಆಲೋಚಿಸತೊಡಗಿದನು.

## 'ಕುಂಭಕರ್ಣ'ನ ಮರಣ.

ಚಿಂತೆಗೊಳಗಾದ ರಾವಣನು ತನ್ನ ನಿದ್ದೆಬಡಕ ಸೋದರನಾದ ಕುಂಭಕರ್ಣನಿಗೆ ಯುದ್ಧ ಮಾಡಲು ಹೇಳಿದನು ! ಭಯಂಕರ ರೂಪದ ಕುಂಭಕರ್ಣನು ರಾಮನೊಡನೆ ಕಾದತೊಡಗಿದನು ! ರಾಮನು ತುಸು ವೇಳೆಯಲ್ಲಿಯೇ ಕುಂಭಕರ್ಣನನ್ನು ಹಣ್ಣುಮಾಡಿದನು ! ಕುಂಭಕರ್ಣನು ರಣರಂಗದಲ್ಲಿ ಪ್ರಾಣ ಬಿಟ್ಟನು !

## ಮಂಡೋದರಿಯ ಬುದ್ಧಿವಾದ.

ರಾವಣನ ಪರಮ ಪತಿವ್ರತೆಯಾದ ಹೆಂಡತಿ 'ಮಂಡೋದರಿ'ಯು ಸೀತೆಯನ್ನು ಬಿಟ್ಟುಬಿಡಲು ಹಾಗೂ ರಾಮನಿಗೆ ಶರಣು ಹೋಗಲು ಗಂಡನಿಗೆ ಹೇಳಿದಳು ! ರಾವಣನಿಗೆ ಬಹಳ ಸಿಟ್ಟು ಬಂದಿತು ! ಹೆಂಡತಿಯ ಹಿತನುಡಿಗಳನ್ನು ಅವನು ಕೇಳಲಿಲ್ಲ. ಹೀಗಾಗಿ ಮಂಡೋದರಿಗೆ ಬಹಳ ದುಃಖವಾಯಿತು. "ದೇವಾ ನನ್ನ ಗಂಡನಿಗೆ ತಿಳಿವು ನೀಡು ! ರಾಮನಿಗೆ ಜಯವಾಗಲಿ ! ಸೀತಾಮಾತೆ ಸಂಕಟದಿಂದ ಪಾರಾಗಲಿ !" ಎಂದು ಅವಳು ದೇವರಲ್ಲಿ ಬೇಡಿಕೊಂಡಳು.

[ ೩೦ ]

# 'ಮೇಘನಾದ' ನ ಶೌರ್ಯ ಲಕ್ಷ್ಮಣನ ಮೂರ್ಛೆ !

ರಾವಣನು ಅಂಜತಕ್ಕವನಲ್ಲ. ಮಹಾ ಹಟ ಮಾರಿ! ತನ್ನ ಹಟದಿಂದ ಪರಮಾತ್ಮನನ್ನು ಒಲಿಸಿ ಕೊಂಡವನು! ಭೂಮಿಯನ್ನೇ ಕೈಲಾಸಮಾಡಿದಂಥವ ನವನು! ಅವನು ಕ್ರೂರನೂ ನಿಜ! ನಂಬಿದವರಿಗೆ ಪ್ರಾಣಕೊಡುವವನೆಂದರೂ ತಪ್ಪಾಗದು! ಇರಲಿ. ರಾಮನ ಮೇಲೆ ಕೋಪಗೊಂಡ ರಾವಣನು ತನ್ನ ವೀರ ಮಿತ್ರನಾದ 'ಮೇಘನಾದ'ನನ್ನು ಯುದ್ಧಕ್ಕೆ ಕಳಿಸಿದನು! ಮೇಘನಾದನೆಂದರೆ ಸಾವಿರಾರು ಸೈನಿಕ ರನ್ನು ಒಂದೇ ಬಾಣದಿಂದ ಸೋಲಿಸುವಂಥವನು! ಅವನು ವಾನರರ ಮೇಲೆ ಏರಿಹೋಗಲು, ಸಾವಿರಾರು ವಾನರರು ಪ್ರಾಣಬಿಟ್ಟರು. ಹೆಣಗಳ ರಾಶಿಯೇರಾಶಿ! ಆಗ ಲಕ್ಷ್ಮಣನು ತಡಮಾಡಡೆ ಮೇಘನಾದನೊಡನೆ ಯುದ್ಧ ಮಾಡತೊಡಗಿದನು! ಮೇಘನಾದನ ಬಾಣ ಪ್ರಯೋಗದಿಂದ ಲಕ್ಷ್ಮಣನು ಸಹ ಅಂಜಿದನು! ಆದರೂ ತಾನು ಬಾಣ ಬಿಡತೊಡಗಿದನು. ಮೇಘ ನಾದನ ಕೊನೆಯ ಬಾಣವು ಲಕ್ಷ್ಮಣನ ಎದೆ ಇರಿ ಯಿತು! ಆಗ ಲಕ್ಷ್ಮಣನು ಮೂರ್ಛೆ ಹೋದನು! ವಾನರರು ಅವನನ್ನು ಎತ್ತಿಕೊಂಡು ರಾಮನ ಕಡೆಗೆ ಹೋದರು. ರಾಮನು ದುಃಖ ಮಾಡತೊಡಗಿದನು.

ಸಂಜೆಯಾದ ಕಾರಣ ಮೇಘನಾದನು ಯುದ್ಧ ನಿಲ್ಲಿಸಿ. ತನ್ನ ನಿವಾಸದಕಡೆಗೆ ಹೋದನು! ಅಂದು ರಾವಣನ ಸೈನಿಕರ ಜಯಕಾರ ಮುಗಿಲು ಮುಟ್ಟು ವಂತೆ ಕೇಳಿಸತೊಡಗಿತು! ಇತ್ತ ಲಕ್ಷ್ಮಣನ ಸ್ಥಿತಿ ಕಂಡು ದುಃಖ ತುಂಬಿ ತುಳುಕಿತು!

## ಹನುಮಂತನ ಸಾಹಸ!

ಲಕ್ಷ್ಮಣನು ಮೂರ್ಛೆಹೋದ ಸಂಗತಿ ವಿಭೀ-ಷಣನಿಗೆ ತಿಳಿಯಿತು. ಆಗ ಅವನು ವೈದ್ಯರನ್ನು ಕರೆ ತಂದನು. ಹಿಮಾಲಯ ಪರ್ವತದಲ್ಲಿರುವ 'ಸಂಜೀವಿನಿ' ಕಡ್ಡಿಯನ್ನು ತಂದು, ಲಕ್ಷ್ಮಣನ ಮೂಗಿಗೆ ಹಿಡಿದರೆ ಅವನು ಬದುಕುವನು' ಎಂದು ವೈದ್ಯರು ಹೇಳಿದರು. ಆ ಕಡ್ಡಿಯನ್ನು ೨೪ ತಾಸುಗಳಲ್ಲಿ ತರಬೇಕಾಗಿತ್ತು! ಅಂತಹ ಕೆಲಸ ಹನುಮಂತನ ಹೊರತು ಬೇರೆ ಯಾರಿಗೂ ಆಗಲು ಸಾಧ್ಯವಿರಲಿಲ್ಲ. ಕೂಡಲೆ ಹನು ಮಂತನು ಹಿಮಾಲಯ ಪರ್ವತದತ್ತ ಹಾರುತ್ತ ಹೋದನು. ಅಲ್ಲಿ ಹೋದೊಡನೆ ಅವನಿಗೆ 'ಸಂಜೀ ವಿನಿ' ಕಡ್ಡಿ ಯಾವುದೆಂಬುದು ತಿಳಿಯಲಿಲ್ಲ. ಕಾರಣ ಅವನು ಹಿಮಾಲಯ ಪರ್ವತವನ್ನು ಕಿತ್ತು ತಂದನು. ಅವನ ಶೌರ್ಯ - ಸಾಹಸ ನೋಡಿ ರಾಮನು ಮರು ಳಾದನು. ವೈದ್ಯರು ಸಂಜೀವಿನಿ ಕಡ್ಡಿಯನ್ನು ತೆಗೆದು ಕೊಂಡು ಲಕ್ಷ್ಮಣನನ್ನು ಬದುಕಿಸಿದರು. ಎಲ್ಲರಿಗೂ ಆನಂದವಾಯಿತು.

## ರಾವಣ - ಮೇಘನಾದರ ಮರಣ !

ಮರುದಿವಸ ರಾವಣನು ಹುರುಪಿನಿಂದ ಯುದ್ಧಕ್ಕೆ ಬಂದನು ! ರಾಮನ ಹೊಡೆತಕ್ಕೆ ಮತ್ತೆ ಹಣ್ಣಾದನು ! ನಂತರ ಮೇಘನಾದನೇ ಎದುರಿಸಬೇಕಾಯಿತು ! ಪಾಪ, ಆ ವೀರ ರಾಜಕುಮಾರನು ರಾಮನ ಒಂದೇ ಬಾಣಗೆ ನೆಲಕುರುಳಿದನು ! ರಾವಣನ ಶೂರ ಸೇನಾಪತಿಗಳೂ ಮಡಿದರು ! ಆಗ ರಾವಣನಿಗೆ ಅಪಾರ ದುಃಖವಾಯಿತು ! ದುಃಖಿಸುತ್ತ ಕೂಡ್ರುವಂತಿರಲಿಲ್ಲ! 'ನಾನಾದರೂ ಉಳಿದೇನು ಮಾಡುವದಿದೆ? ಸೋತರೆ ನರಕ, ಗೆದ್ದರೆ ಸ್ವರ್ಗ' ವೆಂದು ಮತ್ತೆ ಯುದ್ಧಕ್ಕೆ ಸಿದ್ಧನಾದನು. ರಾಮ - ರಾವಣರ ಯುದ್ಧವು ನಾಲ್ಕಾರು ದಿನಗಳೊರೆಗೆ ಸಾಗಿತು ! ಭಯಾನಕ ಯುದ್ಧವದು ! ರಾಮನೂ ಹಣ್ಣಾಗಿದ್ದ ! ರಾವಣನೂ ನುಗ್ಗಾಗಿದ್ದ ! ರಾಮನ ಬೆಂಕಿಯ ಬಾಣದಿಂದ ರಾವಣನು ತಡೆಯಲಿಲ್ಲ ! ವೀರ ರಾವಣನು ಮರಣ ಹೊಂದಿದನು !

## ವಿಭೀಷಣನು ಪಟ್ಟವೇರಿದನು.

ರಾವಣನು ತೀರಿಕೊಂಡ ನಂತರ ರಾಮನು ಯುದ್ಧ ನಿಲ್ಲಿಸಿದನು. ಅಪಾರ ಸೈನಿಕರು ಪ್ರಾಣ ಕಳಕೊಂಡರೆಂದು ರಾಮನು ಮರುಗಿದನು. ರಾವಣನು

ಒಪ್ಪಂದ ಮಾಡಿಕೊಂಡಿದ್ದರೆ ಹೀಗಾಗುತ್ತಿರಲಿಲ್ಲ ಎಂದು ಲಕ್ಷ್ಮಣನು ನುಡಿದನು. ಮಂಡೋದರಿಯು ಪತಿಯ ಮರಣದಿಂದ ದುಃಖಿತಳಾದಳು. ಆಗ ಶ್ರೀರಾಮನು ಅವಳಿಗೆ ಸಮಾಧಾನ ಹೇಳಿದನು.

ವಾನರರೂ ರಾಕ್ಷಸರೂ ಗೆಳೆಯರಂತೆ ಲಂಕಾ ನಗರದಲ್ಲಿ ಬೆರೆತರು. ನಂತರ ರಾಮನು ರಾವಣನ ಸೋದರ ವಿಭೀಷಣನನ್ನು ಲಂಕಾ ರಾಜ್ಯದ ಪಟ್ಟಕ್ಕೆ ಕುಳ್ಳಿರಿಸಿದನು. ನಗರದ ತುಂಬ ವೈಭವವೇ ವೈಭವ! ನಂತರ ವಿಭೀಷಣನು ಸೀತಾಮಾತೆಗೆ ಕೈಮುಗಿದು "ನನ್ನ ಅಣ್ಣನು ಮಾಡಿದ ಅಪರಾಧಕ್ಕಾಗಿ ನಾನು ಕ್ಷಮೆ ಕೇಳುವೆನು!" ಎಂದು ಬೇಡಿಕೊಂಡನು. ಸೀತಾದೇವಿಗೆ ಬಹಳ ಸಂತೋಷವಾಯಿತು.

## ಸೀತೆಯ ಅಗ್ನಿ ಪರೀಕ್ಷೆ.

ರಾಮನು ಸೀತೆಗೆ "ನೀನು ಬಹಳ ಸಂತೋಷಗೊಂಡಿರುವಿ ನಿಜ! ಆದರೆ ನನ್ನ ಕರ್ತವ್ಯವನ್ನು ನಾನು ಮಾಡಿದೆನು. ನೀನು ಇಷ್ಟು ಕಾಲ ಪರ ಪುರುಷನ ಹತ್ತಿರ ಇದ್ದವಳು! ನೀನು ಪವಿತ್ರಳಾಗಿರುವಿ ಎಂದು ನಂಬಲಾರೆ! ಕಾರಣ ನಾನು ನಿನ್ನನ್ನು ಮುಟ್ಟಲಾರೆ!" ಎಂದನು. ಆಗ ಸೀತೆಯು ದುಃಖದಿಂದ ಬೇಡಿಕೊಂಡಳು. ಲಕ್ಷ್ಮಣನು ಅಣ್ಣನ ಮೇಲೆ ಸಿಟ್ಟಾದನು.

ಅಪ್ಪಿಕೊಂಡನು. ಆನಂದವೇ ಆನಂದ. ಆ ಶುಭ ಮುಹೂರ್ತದಲ್ಲಿ ಶ್ರೀರಾಮಚಂದ್ರನು ಅಯೋಧ್ಯಾ ರಾಜನಾದನು. ಭರತನು ಸಂಭ್ರಮದಿಂದ ಅಣ್ಣನಿಗೆ ಬಿಟ್ಟುಕೊಟ್ಟನು. ಕೇಳುವದೇನು! ಅದು ನಿಜ ವಾಗಿಯೂ ಸೌಖ್ಯದ ನೆಲೆಯಾಯಿತು! ರಾಮ ರಾಜ್ಯವೆಂದರೆ ಸುಖದ ತವರುಮನೆ!

## ಗರ್ಭಿಣಿ ಸೀತೆಯ ಹೀನಸ್ಥಿತಿ.

ರಾಮಚಂದ್ರನು ವೈಭವದಿಂದ ರಾಜ್ಯವಾಳುತ್ತಿದ್ದನು. ಸೀತೆಯು ಗರ್ಭಿಣಿಯಾದಳು. ಕೌಸಲ್ಯಾ ದೇವಿಗೆ ಬಹಳ ಸಂತೋಷವಾಯಿತು. ಆಗ ಸೀತೆಯು ವನಭೋಜನ ಬಯಸಿದಳು! ಮುನಿಗಳ ದರ್ಶನ ಪಡೆಯಲು ಹವಣಿಸಿದಳು. ಇತರರಂತೆ ತಿನಿಸಿನ ಬಯಕೆಗಳಲ್ಲ! ಸತ್ಪುರುಷರ ಅಮೃತವಾಣಿ ಕೇಳುವ ಬಯಕೆ ಆಕೆಯದು! ಆದರೆ.......

ಸುಖದ ಹಿಂದೆ ದುಃಖ ಇದ್ದೇ ಇರುವದು. ದುಃಖದ ಹಿಂದೆ ಸುಖವೂ ಉಂಟು. ಸುಖ-ದುಃಖ ಗಳು ಸರಿಸಮವೆಂಬುದನ್ನು ಮರೆಯಬಾರದು! ಒಂದು ದಿನ ಶ್ರೀರಾಮಚಂದ್ರನು ರಾತ್ರಿ ಸಮಯದಲ್ಲಿ ತನ್ನ ರಾಜಧಾನಿಯೊಳಗೆ ಗುಪ್ತವಾಗಿ ತಿರುಗಾಡುತ್ತಿದ್ದನು. ಪ್ರಜೆಗಳ ಸುಖ - ದುಃಖವನ್ನು ಕದ್ದು ಕೇಳಲು ಅದು ಉಪಾಯವಾಗಿತ್ತು! ಯಾಕಂದರೆ

ಯಾರೂ ಸಂಕಟದಲ್ಲಿ ಇರಬಾರದೆಂಬುದೇ ಅವನ ಅಪೇಕ್ಷೆ. ಆಗ ಅವನು ಒಂದು ಮನೆಯ ಮುಂದೆ ನಿಂತು ಜಗಳ ಕೇಳಿದನು. ಅದು ಹೀಗೆ ಆ ಮನೆಯಲ್ಲಿ ಗಂಡ ಹೆಂಡರು ಜಗಳಾಡುತ್ತಿದ್ದರು. ನೆರೆಮನೆಯವರು ಬುಂದ್ಧಿ ಹೇಳುತ್ತಿದ್ದರು.

ಗಂಡ: ಏ.......ರಂಡೆ ನೀನು ಮನೆಯಿಂದ ಹೊರಡು!

ಹೆಂಡತಿ: ಪ್ರಿಯರೇ, ನನ್ನನ್ನು ಹೊರದೂಡ ಬೇಡಿರಿ!

ನೆರೆಮನೆಯವ: ಪಾಪ, ಇವಳನ್ನು ಹೊರಗೆ ಹಾಕಬೇಡಪ್ಪ! ಕರೆದುಕೋ!!

ಗಂಡ: ಯಾಕಂತೆ? ‘ಬಿಟ್ಟ ಹೆಂಡತಿಯನ್ನು ಕರೆದುಕೊಳ್ಳಲು ನಾನೇನು ಶ್ರೀರಾಮಚಂದ್ರನೇನು’? ಸಾಧ್ಯವಿಲ್ಲ!

ಈ ಮಾತನ್ನು ಕೇಳಿ ಶ್ರೀರಾಮಚಂದ್ರನಿಗೆ ಬಹಳ ವೇದನೆಯಾಯಿತು! ತನ್ನ ನಡಾವಳಿ ಪ್ರಜೆಗಳಿಗೆ ಸರಿಕಾಣಲಿಲ್ಲವೆಂದು ಅವನು ಸೀತೆಯನ್ನು ಬಿಡಲು ನಿರ್ಧರಿಸಿದನು.

ಶ್ರೀರಾಮಚಂದ್ರನು ತನ್ನ ನಿರ್ಧಾರವನ್ನು ತನ್ನ ಪ್ರೀತಿಯ ತಮ್ಮ ಲಕ್ಷ್ಮಣನಿಗೆ ಹೇಳಿದನು.

ರಾಮ : ತಮ್ಮಾ, ಹೀಗೆ ಪ್ರಜೆಗಳು ಆಡಿ ಕೊಂಡಾಗ ನಾನು ಸುಮ್ಮನಿರಲಾರೆ !

ಲಕ್ಷ್ಮಣ : ಅಣ್ಣಾ ಜನರ ಬಾಯಿಗೆ ಬೀಗವಿಲ್ಲ ! ಅವರು ಏನೇ ಅನ್ನಲಿ! ನೀವು ನೊಂದುಕೊಳ್ಳಬಾರದು!

ರಾಮ : ಲಕ್ಷ್ಮಣಾ, ನೀನು ಬುದ್ಧಿ ಹೇಳಬೇಡ ! ನನ್ನ ಅಪ್ಪಣೆ ಇದು ! ನೀನು ಸೀತೆಯನ್ನು, 'ಮುನಿ ಗಳ ದರ್ಶನಕ್ಕೆ' ಎಂದು ಕರೆದು ಕೊಂಡು ಹೊಗು ! ಅವಳಿಗೆ ಈ ಸಂಗತಿ ಈಗಾಗಲೇ ಹೇಳಬೇಡ ! ಘೋರ ವಾದ ಅಡವಿಯಲ್ಲಿ ಅವಳನ್ನು ಬಿಟ್ಟು ಬರಬೇಕು. ನಾಳೆಯೇ ಹೊರಡು ! ಇದು ರಾಜಾಜ್ಞೆ !

ಅಣ್ಣನ ಮಾತು ಕೇಳಿ ಲಕ್ಷ್ಮಣನು ಕಡು ನೊಂದನು ! ಕೂಸಿನಂತೆ ಬಿಕ್ಕಿ ಬಿಕ್ಕಿ ಅತ್ತನು! ಪಾಪ, ಲಕ್ಷ್ಮಣನು ಅಣ್ಣನ ಮೇಲೆ ಬಹಳ ಪ್ರೀತಿ. ಅತ್ತಿಗೆ ಯನ್ನು ತನ್ನ ಹಡೆದ ತಾಯಿಯಂತೆ ಕಾಣುತ್ತಿದ್ದನು ! ಮಾಡುವದೇನಿದೆ? ಅಣ್ಣನ ಮಾತು ಮೀರಿದರ ಪಾಪ! ಅತ್ತಿಗೆಯನ್ನು ಮೋಸಗೊಳಿಸುವದೂ ಪಾಪ !! ಹೀಗಾಗಿ ಲಕ್ಷ್ಮಣನ ಸ್ಥಿತಿ ಹೇಗಾಯಿತೆಂಬುದನ್ನು ವರ್ಣಿಸಲು ಬಾರದು ! ಅವನು ದುಃಖಸಾಗರದಲ್ಲಿ ಮುಳುಗಿದನು! ತುಂಬ ಗರ್ಭಿಣಿಯಾದ ಸೀತೆಯನ್ನು

ಕಾಡಡವಿಯೊಳಗೆ ಬಿಡುವದೆಂದರೆ ಅವನಿಗೆ ಮಹಾ ಪಾತಕ ಎನಿಸಿತು! ಬಹಳ ಗೋಳಾಡಿದನು— ಮೌನವಾಗಿ!

## ಸೀತೆಯನ್ನು ಅಡವಿಪಾಲು ಮಾಡಿದರು!

ದಯಾನಿಧಿ ಲಕ್ಷ್ಮಣನು ದೇವರ ಮೇಲೆ ಭಾರ ಹಾಕಿ, ಪ್ರೀತಿಯ ಅತ್ತಿಗೆಯನ್ನು ಕರೆದುಕೊಂಡು, ರಥವನ್ನು ಅಡವಿಯ ಕಡೆಗೆ ಬಿಟ್ಟನು.

ಮುನಿ ಪುಂಗವರ ದರ್ಶನ ಪಡೆಯಲು ಹಂಬ ಲಿತಳಾದ ಸೀತೆ ಕುಲು ಕುಲು ನಗುತ್ತ ರಥದಲ್ಲಿ ಕುಳಿತಿದ್ದಳು. ಆದರೆ ಲಕ್ಷ್ಮಣನು ಬಾಡಿದ ಮೋಗ ದಿಂದ ರಥದ ಮುಂದೆ ಕುಳಿತಿದ್ದನು. ಆಗ ಸೀತೆ 'ಹೀಗೇಕೆ ಮುಖ ಬಾಡಿದೆ ತಮ್ಮ'!? ಎಂದು ಕೇಳಿದಳು. 'ತಾಯಿ, ಏನಿಲ್ಲ!' ಎಂದು ಮೈದು ನನು ನುಡಿದನು. ಸೀತೆಗೆ ಕಾಣದಂತೆ ಅವನು ಅಳುತ್ತಿದ್ದನು! ಅವನ ಕಣ್ಣುಗಳಿಂದ ನೀರು ಹರಿ ಯುತ್ತಿತ್ತು! ಅದೆಂಥ ಸಂಕಟ! ನಮ್ಮ ಕಣ್ಣುಸಹ ತುಂಬಲಾಗುತ್ತವೆಯಲ್ಲವೇ?........

ಘೋರವಾದ ಅರಣ್ಯದಲ್ಲಿ ರಥವು ಹೋಯಿತು, ಸೀತೆ ಗಾಬರಿಯಾದಳು. ರಥವು ನಿಂತಿತು.

ಲಕ್ಷ್ಮಣ : ತಾಯೀ, ಕೆಳಗೆ ಇಳಿಯಿರಿ !

ಸೀತೆ : ತಮ್ಮಾ ಇಲ್ಲಿ ಯಾಕೆ ಇಳಿಯಲಿ? ಇದು ಘೋರವಾದ ಅಡವಿ! ಮುನಿಗಳ ಗುಡಿಸಲುಗಳು ಒಂದೂ ಕಾಣಲೊಲ್ಲವು ! ಇದೇನಿದು ಲಕ್ಷ್ಮಣಾ! ಹೀಗೆಕೆ ನಿಂತೆ?

ಲಕ್ಷ್ಮಣ : ಅಮ್ಮಾ....... ಈ ಪಾಪಿಯನ್ನು ಕ್ಷಮಿಸಿರಿ !

ಸೀತೆ : ಅಯ್ಯೋ! ಹೀಗೇಕೆ ಕಂದಾ ! ಯಾಕೆ ಅಳುತ್ತಿರುವೆ? ಏನಾಯಿತು ! ಇದೇನು ಸಂಕಟ ಬಂದಿತಪ್ಪಾ.......

ಲಕ್ಷ್ಮಣ : ತಾಯೀ ....... ಅಣ್ಣನು ನಿಮ್ಮನ್ನು ಅಡವಿಯಲ್ಲಿ ಬಿಟ್ಟು ಬರಲು ಹೇಳಿದನು !

ಸೀತೆ : ಅಯ್ಯೋ.......ರಾಮಚಂದ್ರಾ....... ನನಗೆ ಇನ್ನಾರು ಗತಿ?!

ಸೀತಾದೇವಿಯು ದುಃಖದಿಂದ ‘ ಬೇರು ಕೊಯ್ದ ಎಳೆ ಬಳ್ಳಿಯು ನೆಲಕ್ಕೆ ಬೀಳುವಂತೆ’ ಬಿದ್ದಳು ! ಅವಳನ್ನು ಲಕ್ಷ್ಮಣನು ಪರಿಪರಿಯಿಂದ ಉಪಚಾರ ಮಾಡಿದನು ! ಇಬ್ಬರೂ ದುಃಖಿಸುತ್ತ ಕುಳಿತಾಗ, ಅಲ್ಲಿಯ ಗಿಡಮರಗಳು ಸಹ ಅಲ್ಲಾಡದೆ ನಿಂತವು !!

ಕುಸು ಹೊತ್ತಿನ ಮೇಲೆ ಸೀತಾದೇವಿಯು ದುಃಖಿಸುತ್ತ ಎದ್ದು ಕುಳಿತಳು. ಲಕ್ಷ್ಮಣನು ಮಗುವಿನ-ಹಾಗೆ ಅವಳ ಹತ್ತರ ಕುಳಿತು ಕಣ್ಣೀರು ಸುರಿಸಿದನು!

ಸೀತೆ :— ಮಗೂ ಲಕ್ಷ್ಮಣಾ ನೀನೇಕೆ ಅಳುವೆ! ಇದು ನನ್ನ ಕರ್ಮ! ಯಾರೇನು ಮಾಡುವದಿದೆ? ಕೈ ಹಿಡಿದ ಪತಿಯೇ ಹೀಗೆ ಮಾಡಿದಾಗ ಯಾರಿಗೆ ದೂರಲಿ? ನೀನು ನಡೆಯಪ್ಪ, ನಿನ್ನ ಅಣ್ಣನಿಗೆ ಆರಾಮವಾಗಿರಲು ಹೇಳು! ನನ್ನ ದೇವರು ಶ್ರೀರಾಮ-ಚಂದ್ರನ ಧ್ಯಾನದಲ್ಲಿಯೇ ಕೂಡ್ರುತ್ತೇನೆ! ಯಾಕಂದರೆ ನಾನು ಎಲ್ಲಿ ಇದ್ದರೂ ಅವರೇ ನನ್ನ ರಕ್ಷಕರು! ಹೋಗು!

ಲಕ್ಷ್ಮಣ :— ತಾಯೀ .... ಹೋಗುತ್ತೇನೆ! 'ಎಲೈ ಗಿಡಗಳಿರಾ, ಎಲೈ ಅಡವಿಯಲ್ಲಿರುವ ಸಕಲ ಜೀವಿಗಳೇ, ಸೂರ್ಯ ದೇವನೇ ಸೀತಾಮಾತೆಯನ್ನು ಕಾಪಾಡಿರಿ! ಈ ದೇವತೆಯನ್ನು ಕಾಯುವ ಭಾರ ನಿಮ್ಮದೇ!' ಅಮ್ಮಾ, ನಾನು ಹೋಗಿ ಬರುತ್ತೇನೆ..!

ಹೀಗೆಂದು ಲಕ್ಷ್ಮಣನು ಬಹು ಸಂಕಟದಿಂದ ಅಯೋಧ್ಯೆಗೆ ತೆರಳಿದನು. ಲಕ್ಷ್ಮಣನು ಹೋದ ಕೂಡಲೆ ಸೀತೆಯ ದುಃಖ ಹೆಚ್ಚಾಯಿತು! ಅವಳು ಅಳುವದನ್ನು ನೋಡಿ ಹಾವು, ಹುಲಿ, ಸಿಂಹ,

ನವಿಲು ಮೊದಲಾದ ಪ್ರಾಣಿಗಳೂ, ಜಂತುಗಳೂ ಬಂದು ಉಪಚಾರ ಮಾಡಿದವು. ಹಾವು ಹೆಡೆ ತೆರೆದು ನೆರಳು ಮಾಡಿತು! ನವಿಲು ಗರಿಗೆದರಿ ಗಾಳಿ ಬೀಸಿತು! ಗಿಳಿಗಳು ದೇವಿಗೆ ಹಣ್ಣು ಹಂಪಲು ತಂದವು! ಹುಲಿ ಸಿಂಹಗಳು ಅವಳ ಸುತ್ತು ಕುಳಿತು ಕಾವಲು ಮಾಡಿದವು.

## ವಾಲ್ಮೀಕಿಯ ಭಾಗ್ಯ

## ಹಾಗೂ

## ಸೀತೆಯ ಸೌಭಾಗ್ಯ.

ಒಂದು ರಾತ್ರಿಯನ್ನು ಸೀತೆ ಬಹು ಸಂಕಟದಿಂದ ಕಳೆದಳು. ಬೆಳಗಿನ ಜಾವದಲ್ಲಿ ಅವಳು ಅಳುವ ಧ್ವನಿ ಕೇಳಿ, ಅಲ್ಲಿಯೇ ಸಮೀಪದ ತಪೋವನದಲ್ಲಿದ್ದ ಋಷಿಗಳು ಬಂದರು! ಅವರ ಹೆಸರು ' ವಾಲ್ಮೀಕಿ '. ಸೀತೆಯನ್ನು ನೋಡಿ ಅವರು ಮರುಗಿದರು. " ನಡೆ ತಾಯಿ, ನಾನು ನಿನ್ನನ್ನು ಸಲಹುವೆನು. ನೀನು ಭಾಗ್ಯವಂತಳಿರುವೆ! ದುಃಖಿಸಬೇಡ! ವೀರರಾದ ಅವಳಿ ಮಕ್ಕಳನ್ನು ಹಡೆಯಲಿರುವಿ! " ಎಂದು ಹೇಳಿದರು. ಸೀತೆಯ ದುಃಖ ದೂರಾಯಿತು.

"ಅಮ್ಮಾ, ನಿನ್ನ ಪಾದ ಧೂಳಿಯಿಂದ ನಮ್ಮ ತಪೋವನ ಪಾವನವಾಯಿತು ! ಇದು ನನ್ನ ಭಾಗ್ಯ! ಎಂದು ಋಷಿಗಳು ಕೊಂಡಾಡಿದರು.

## ಲವ - ಕುಶರ ಜನ್ಮ.

ದಿನ ತುಂಬಲು ಸೀತೆಗೆ ಅವಳಿ ಗಂಡುಮಕ್ಕಳು ಜನಿಸಿದವು. ಹಿರಿಯವನು ಕುಶ, ಕಿರಿಯವನು ಲವ. ವಾಲ್ಮೀಕಿ ಗುರುಗಳು ಆ ಮುದ್ದು ಮಕ್ಕಳಿಗೆ ನಾಮಕರಣ ಮಾಡಿದರು.

## ಬಾಲರ ಶಿಕ್ಷಣ.

ಕುಶ, ಲವರು ವಾಲ್ಮೀಕಿ ಋಷಿಗಳಿಂದ ಎಲ್ಲ ವಿದ್ಯೆಗಳನ್ನು ಬೇಗಬೇಗನೆ ಕಲಿತುಕೊಂಡರು ! ವೀರ ಪುತ್ರರ ಪರಾಕ್ರಮ ಕಂಡು ಸೀತೆಗೆ ಹಿಗ್ಗು ! ತಾಯಿಯಿಂದ ತಮ್ಮ ತಂದೆಯ, ಅಜ್ಜನ, ಕಕ್ಕಂದಿರ ಕತೆಯನ್ನು ಬಾಲರು ಕೇಳಿದರು. ತಮ್ಮ ತಾಯಿಯನ್ನು ತೊಂದರೆಗೆ ಈಡು ಮಾಡಿದ ತಂದೆಗೆ ಬಾಲರು ಬೈದರು ! ಅವರ ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದಾಯಿತು ! ಯುದ್ಧ ಕಲೆಯಲ್ಲಿಯೂ, ರಾಜನೀತಿಯಲ್ಲಿಯೂ ಅವರು ನಿಪುಣರಾದರು.

ಸಿಂಹ, ಹುಲಿಗಳನ್ನು ಎಳೆದು ತಂದು, ಆಟವಾಡುವ ಭಂಟರವರು !

## ತಂದೆ ಮಕ್ಕಳಲ್ಲಿ ಯುದ್ಧ.

ಮುಂದೆ ಶ್ರೀರಾಮಚಂದ್ರನು 'ಅಶ್ವಮೇಧ ಯಾಗ' ಮಾಡಿದನು. ಅವನ ಯುದ್ಧದ ಸಂಕೇತವಾದ ಕುದುರೆಯು ವಾಲ್ಮೀಕಿ ಮುನಿಗಳ ತಪೋವನ ದಲ್ಲಿ ಬಂದಿತು. ಆಗ ಲವ - ಕುಶರು ಅದನ್ನು ಕಟ್ಟಿ ಹಾಕಿದರು. ಕುದುರೆಯ ಹಿಂದೆ ರಾಮನ ಸೈನಿಕರು ಇದ್ದರೂ, ವೀರ ಬಾಲಕರು ಆ ಸೈನಿಕರೊಡನೆ ಹೋರಾಡಿದರು. ಸಾವಿರಾರು ಜನ ಸೈನಿಕರು ಮರಣ ಹೊಂದಿದರು ! ಆಗ ಶ್ರೀರಾಮ-ಲಕ್ಷ್ಮಣರೂ ಯುದ್ಧ ಭೂಮಿಗೆ ಬಂದರು! "ನೀವು ಬಾಲಕರು, ನಮ್ಮೊಡನೆ ಯುದ್ಧ ಮಾಡಲು ಸಾಧ್ಯವಿಲ್ಲ ! ಕುದುರೆಯನ್ನು ಬಿಟ್ಟು ಬಿಡಿರಿ !" ಎಂದು ರಾಮನು ನುಡಿಯಲು "ಕುದುರೆಯನ್ನು ಬಿಡಿಸಿಕೊಳ್ಳಲು ಈ ನೆವವೇಕೆ? ಹೇಡಿಗಳೇ, ಶಕ್ತಿ ಇದ್ದರೆ ಯುದ್ಧಕ್ಕೆ ಸಿದ್ಧರಾಗಿರಿ !" ಎಂದು ಲವ - ಕುಶರು ಗುಡುಗಿದರು. ಬಾಲಕರ ಸಹಾಸದ-ವೀರಾವೇಶದ ಮಾತು ಕೇಳಿ ರಾಮ-ಲಕ್ಷ್ಮ ಣರು ಮೆಚ್ಚಿದರು; ಮರುಳಾದರು.

“ ವೀರ ಕುಮಾರರೇ ನೀವು ಯಾರು ? ನಿಮ್ಮ ಹೆಸರೇನು ? ನಿಮ್ಮ ರಾಜ್ಯಯಾವುದು ?” ಎಂದು ರಾಮನು ಕೇಳಿದನು. ಆ ಬಾಲಕರು “ ವೀರಾಧಿ ವೀರನಾದ ಅಯೋಧ್ಯಾಧಿಪತಿ ಶ್ರೀರಾಮಚಂದ್ರನೇ ನಮ್ಮ ಪಿತನು ! ಸೀತಾದೇವಿಯು ನಮ್ಮ ಜನನಿ ! ಋಷಿ ಪುಂಗವ ವಾಲ್ಮೀಕಿಗಳು ನಮ್ಮ ಗುರುಗಳು ! ನಮಗೆಂಬರು ಲವ - ಕುಶ. ನಿಮ್ಮ ಹೆಸರೇನು ? ” ಎಂದು ನುಡಿದರು.

ಆನಂದಾತಿರೇಕದಿಂದ ತನ್ನ ಪ್ರಿಯ ಮಕ್ಕಳನ್ನು ರಾಮನು ಎತ್ತಿಕೊಂಡನು. ಲಕ್ಷ್ಮಣನು ನಲಿದಾಡಿದನು. ವಾಲ್ಮೀಕಿ ಮುನಿಗಳ ಆಶೀರ್ವಾದ ಪಡೆದು ಸೀತೆ - ರಾಮರು ಮತ್ತೆ ಕೂಡಿದರು. ಸಮಸ್ತ ಜನರು ವೈಭವದಿಂದ ಅಯೋಧ್ಯೆಗೆ ತೆರಳಿದರು !

ಸತ್ಯ—ಮೇವ ಜಯತೆ !

